

# ಭಾರತೀಯ ಸಂಸ್ಕೃತಿಗೆ ಕರ್ನಾಟಕದ ಕೊಡುಗೆ

ಡಾ। ಟಿ. ಎಸ್. ರಾಜಗೋಪಾಲ್



# ಭಾರತೀಯ ಸಂಸ್ಕೃತಿಗೆ ಕರ್ನಾಟಕದ ಕೊಡುಗೆ

ಡಾ|| ಟಿ. ಎಸ್. ರಾಜಗೋಪಾಲ್



ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ನೃಪತುಂಗ ರಸ್ತೆ
ಬೆಂಗಳೂರು—೫೬೦ ೦೦೨

ಡಾ॥ ಟಿ. ಎಸ್. ರಾಜಗೋಪಾಲ್ ಅವರಿಂದ ರಚಿಸಲ್ಪಟ್ಟ 'ಭಾರತೀಯ ಸಂಸ್ಕೃತಿಗೆ ಕರ್ನಾಟಕದ ಕೊಡುಗೆ' ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದವರಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದಲ್ಲಿ (ಜನವರಿ ೧೯೮೩) ಐಬಿಎಚ್ ಪ್ರಕಾಶನದವರ ಕೃಪೆಯಿಂದ ಪ್ರಕಟಿಸಲ್ಪಟ್ಟಿದ್ದು.

BHARATHEEYA SAMSKRITIGE KARNATAKADA KODUGE —a monograph on Karnataka's contribution to Indian culture written by Dr. T. S. Rajagopal. Published by The Directorate of Kannada and Culture, Government of Karnataka, 14/3A Nrupathunga Road, Bangalore-560 002, on the occasion of the *FIRST WORLD KANNADA CONFERENCE (January 1983)* by the Courtesy of IBH Prakashana, Gandhinagar, Bangalore-560 009.



ಬೆಲೆ ರೂ. ೨-೦೦

ಮುಖಪುಟ : ಚಂದ್ರನಾಥ್
ಛಾಯಾಚಿತ್ರಗಳು : ಬಿ. ಕೇಸರ್ ಸಿಂಗ್

ಮುದ್ರಕರು : ಎಚ್. ಎಸ್. ಎನ್. ರಾವ್, ಐಬಿಎಚ್ ಪ್ರಕಾಶನ ಪ್ರಿಂಟರಿ,
ಬೆಂಗಳೂರು-೫೬೦ ೦೦೯

# ಸಂಸ್ಕೃತಿ ಎಂದರೇನು ?

ನಿಮ್ಮ ಮನೆಯ ಈ ಚಿಕ್ಕ ಮಗುವನ್ನು ನೋಡಿ ! ಎಲ್ಲ ನಿಮ್ಮ ಹಾಗೆಯೇ ಇದೆಯಲ್ಲವೆ ? ಕೈಕಾಲುಗಳು, ಕಣ್ಣುಗಳು, ಮೂಗು ಎಲ್ಲವೂ ನಿಮ್ಮಂತೆಯೇ. ಆದರೆ ಒಂದೇ ಒಂದು ವ್ಯತ್ಯಾಸ. ಮಗುವಿನ ಆಕೃತಿ ತುಂಬಾ ಚಿಕ್ಕದು, ಅದರ ಅಂಗಗಳು ಎಲ್ಲವೂ ಪುಟ್ಟವು. ದಿನ ಕಳೆದಂತೆ, ಕಾಲ ಉರುಳಿದಂತೆ, ಅದರ ಅಂಗಾಂಗ ಗಳೆಲ್ಲವೂ ದೊಡ್ಡವಾಗುವುವು. ಇಂದಿನಿಂದ ಇನ್ನು ತಿಂಗಳಿಗೆ, ವರ್ಷಕ್ಕೆ ಕ್ರಮಕ್ರಮವಾಗಿ ಬೆಳೆದು ಕೆಲವು ವರ್ಷಗಳ ನಂತರ ಯುವಕನೋ ಯುವತಿಯೋ ಆಗುವುದು. ಅದೇ ರೀತಿಯಲ್ಲಿ ನಮ್ಮ ಮಾನವ ಕುಲವು ಸಹ ಅಭಿವೃದ್ಧಿಗೊಳ್ಳುವುದು. ಸಹ ಸ್ರಾರು ವರ್ಷಗಳ ಹಿಂದೆ ಆದಿಮಾನವನು ಕಪಿಯಾಗಿ ಕೈಕಾಲು ಊರಿಕೊಂಡು ಮರದಿಂದ ಮರಕ್ಕೆ ಹಾರುತ್ತಿದ್ದನು. ಅವನ ಮೈ ತುಂಬ ಕೂದಲುಗಳು ! ಕೈಸನ್ನೆ ಮತ್ತು ವಿಚಿತ್ರ ಗುಟುರು ಗಳಿಂದ ತನ್ನ ಇಚ್ಛೆಯನ್ನು, ಭಾವವನ್ನು ಮತ್ತೊಬ್ಬನಿಗೆ ತಿಳಿಯಪಡಿಸುತ್ತಿದ್ದ. ಕ್ರಮೇಣ ತನ್ನನ್ನೂ ತನ್ನ ಪರಿಸ್ಥಿತಿ ಯನ್ನೂ ಇತರ ವಸ್ತುಗಳು ಮತ್ತು ಪ್ರಾಣಿಗಳನ್ನೂ ಗಮನಿಸಿ ಸ್ವಲ್ಪ ಸ್ವಲ್ಪವಾಗಿ ಉತ್ತಮಗೊಳ್ಳುತ್ತಾ ಇಂದು ಬಗೆ ಬಗೆಯ ಉಡಿಗೆ ತೊಡುವ ಆಧುನಿಕ ವ್ಯಕ್ತಿಯಾಗಿದ್ದಾನೆ.

ಅಂದು ರಾತ್ರಿಯ ಕತ್ತಲೆಗೆ ಹೆದರಿ ಮರದ ಕವಲುಗಳ ನಡುವೆ ಮುದ್ದೆಯಾಗಿ ಬಿದ್ದುಕೊಂಡು ಚಳಿಯಲ್ಲಿ ಗಡಗಡ

ನಡುಗುತ್ತಾ ಬೆಳಗಾಗುವುದನ್ನು ತವಕದಿಂದ ನಿರೀಕ್ಷಿಸುತ್ತಿದ್ದ ಆ ಮನುಷ್ಯನೂ, ಇಂದು ರಾತ್ರಿಯಲ್ಲಿ ಹವಾ ನಿಯಂತ್ರಿತ ಕೋಣೆಯಲ್ಲಿ, ಹಿತಕರವಾದ ಮಂದ ಪ್ರಕಾಶದಲ್ಲಿ ಬೆಚ್ಚಗೆ ಮಲಗುವ ಮನುಷ್ಯನೂ ಒಂದೇ ಕುಲದವರೇ ಆದರೂ; ಅಂದಿಗೂ–ಇಂದಿಗೂ ಎಂಥ ಅದ್ಭುತ ವ್ಯತ್ಯಾಸ! ನೋಡಿದವರಿಗೆ ಭ್ರಮೆಯಾಗುವಷ್ಟು ಅಚ್ಚರಿ! ಇಂದಿನ ನಮ್ಮ ನಡೆ–ನುಡಿ, ಆಹಾರ–ವಿಹಾರ; ಆಚಾರ–ವಿಚಾರ ಎಲ್ಲವುಗಳಲ್ಲಿಯೂ ಸಹಸ್ರಾರು, ಲಕ್ಷಾಂತರ ವರ್ಷಗಳ ಕ್ರಮಬದ್ಧ ವಿಕಾಸದಿಂದಾಗಿ ಈ ಅದ್ಭುತ ವ್ಯತ್ಯಾಸ ಕಂಡುಬರುವುದು. ಇದನ್ನೇ ನಾವು ಸಂಸ್ಕರಿಸಲಾದ ಅಂದರೆ ಕ್ರಮಬದ್ಧವಾಗಿ ಉತ್ತಮಗೊಂಡ ಸ್ಥಿತಿ ಅಥವಾ ಸಂಸ್ಕೃತಿ ಎನ್ನುತ್ತೇವೆ.

## ಸಂಸ್ಕೃತಿಯ ವಿಭಿನ್ನತೆ

ನಿಮ್ಮ ಶಾಲೆಯಲ್ಲಿ ಒಂದೇ ವಯಸ್ಸಿನ ಹತ್ತಾರು ಮಕ್ಕಳು ಇರುವರು. ವಯಸ್ಸಿನ ಸಾಮ್ಯ ಇದ್ದರೂ ಮುಖ ಲಕ್ಷಣಗಳಲ್ಲಿ, ಆಕೃತಿಯಲ್ಲಿ, ಗಾತ್ರ–ತೂಕಗಳಲ್ಲಿ ಒಂದೇ ರೀತಿ ಇರುವುದಿಲ್ಲ. ಪ್ರಪಂಚದ ಬೇರೆಡೆಗಳಲ್ಲಿ ವಾಸಿಸುವ ಜನರು ಅಚ್ಚು ಹಾಕಿದ ಮಾದರಿಯಲ್ಲಿ ಒಂದೇ ರೀತಿಯಲ್ಲಿ ಇರುವುದಿಲ್ಲ. ಏಕೆಂದರೆ ಸಂಸ್ಕೃತಿಯು ಒಂದು ಬೆಳವಣಿಗೆ, ಅದು ತನ್ನ ಪರಿಸ್ಥಿತಿಯನ್ನು ಅನುಕೂಲತೆ ಮತ್ತು ಅನಾನುಕೂಲತೆಗಳನ್ನು ಹೊಂದಿಕೊಂಡು ಇರುವುದು. ಆದುದರಿಂದ ನಾವು ವ್ಯಾಪ್ತಿಯ ದೃಷ್ಟಿಯಿಂದ ನೋಡುವುದಾದರೆ ಸಂಸ್ಕೃತಿಯನ್ನು ದೇಶ ಅಥವಾ ಜನಾಂಗಗಳಿಗನುಸಾರವಾಗಿ ವಿಂಗಡಿಸಬಹುದು. ಉದಾಹರಣೆಗೆ–

ಆಫ್ರಿಕಾ, ಯೂರೋಪ್, ಭಾರತ, ಚೀನಾ ಜನಾಂಗಗಳ ಸಂಸ್ಕೃತಿ ಎಂದು ಪ್ರತ್ಯೇಕ ಪ್ರತ್ಯೇಕ ಗುರುತಿಸಬಹುದು.

## ಸಂಸ್ಕೃತಿಯು ಇತಿ ಮಿತಿಗಳು

ನಮ್ಮ ಒಳಿತಿಗೆ, ನಮ್ಮ ಸಮಾಜ ಮತ್ತು ದೇಶಕ್ಕೆ ಹಿತಕರ ಎಂದು ಭಾವಿಸಿ ಏನನ್ನು ಮಾಡುವೆವೋ ಅವೆಲ್ಲವೂ ನಮ್ಮ ಜನಾಂಗದ ಸಂಸ್ಕೃತಿ ಎನಿಸುವುದು. ನಾವು 'ಹಾಡಿದ ಹಾಡು ಸೃಷ್ಟಿಸಿದ ಬೊಂಬೆ, ಕುಣಿದ ಕುಣಿತ, ಬರೆದ ಕಾವ್ಯ' ಎಲ್ಲವೂ ಸಂಸ್ಕೃತಿಯ ಪೂರಕ, ಪೋಷಕ. ಆದರೆ ಇಲ್ಲಿ ನಾವು ನೆನಪಿಡುವುದು ಏನೆಂದರೆ ಆಯಾ ಕಾರ್ಯಗಳು ನಮ್ಮ ಜೀವನವನ್ನು ಉತ್ತಮಪಡಿಸಲು ಎಷ್ಟರಮಟ್ಟಿಗೆ ನೆರವಾಗಿದೆ ಎಂಬುದನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಒಬ್ಬ ಸಂಗೀತಗಾರನು ಬಡತನದ ಬೇಗೆಯಲ್ಲಿ ಬೇಯುತ್ತಿರಬಹುದು. ಅವನ ಸಂಗೀತವು ಜನಾಂಗವನ್ನು ಆನಂದ ಸುಧೆಯಿಂದ ತಣಿಸಿದರೆ, ಅದು ಸಂಸ್ಕೃತಿಯ ಪೋಷಕ. ಅವನ ಬಾಳಿನ ದೃಷ್ಟಿಯಿಂದ ಅವನ ಸಂಗೀತದ ಒಲವು 'ಹುಚ್ಚು' ಎನಿಸಬಹುದು, ಆದರೆ ಜನತೆಯ ದೃಷ್ಟಿಯಲ್ಲಿ ಅದು ಜನಾಂಗಕ್ಕೆ ಅತ್ಯುತ್ತಮ ಕೊಡುಗೆ ಆಗುವುದು. ಇನ್ನೊಂದು ಉದಾಹರಣೆ ಗಮನಿಸೋಣ. ದಾನಶೂರ ಕರ್ಣನ ಕತೆಯನ್ನು ಕೇಳಿದ್ದೀರಿ. ಕರ್ಣನು ಕೇಳಿದುದನು ಕೊಟ್ಟು ಬಿಡುತ್ತಿದ್ದನಂತೆ. ಅವನ ಉದಾರತೆಯು ಅವನ ಅಭಿಮಾನಿಗಳಿಗೆ 'ಅತಿರೇಕ' ಎಂದು ಅನ್ನಿಸಬಹುದು. ತನ್ನ ಎದೆಯನ್ನೇ ಹಿರಿದು ಕವಚವನ್ನು ಧಾರೆ ಎರೆದುಕೊಟ್ಟ ಅವನ ನಿಸ್ವಾರ್ಥ ತ್ಯಾಗವು ಜನಾಂಗಕ್ಕೇ ಒಂದು ಮೇಲ್ಪಂಕ್ತಿ ಆಯಿತು. ಹೀಗೆ ಬಾಳಿನಲ್ಲಿ ಅಸಂಬದ್ಧತೆ ತೋರಿದರೂ ಘಟನೆಗಳನ್ನು

ಸುಸಂಬದ್ಧವಾಗಿ ಹೆಣೆದು ಜನಾಂಗವು ಪಡೆಯುವ ಅಭ್ಯುದಯ ವನ್ನು ಸಂಸ್ಕೃತಿಯ ಶ್ರೇಣಿಯಲ್ಲಿ ಕಾಣಬಹುದು.

## ಸಂಸ್ಕೃತಿಯ ಗುಣ ದೋಷಗಳು

ಯಾವುದೇ ಸಂಸ್ಕೃತಿಯನ್ನು ನಾವು 'ಇದು ಒಳ್ಳೆಯದು' ಅಥವಾ 'ಇದು ಕೆಟ್ಟದ್ದು' ಎಂದು ಹೇಳಲು ಆಗುವುದಿಲ್ಲ. ಒಬ್ಬರಿಗೆ ಒಳ್ಳೆಯದಾಗಿ ತೋರಿದುದು ಮತ್ತೊಬ್ಬರಿಗೆ ಕೆಡು ಕಾಗಿ ತೋರುವುದು.

ಒಮ್ಮೆ ಇಬ್ಬರು ಮುದುಕಿಯರು ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದರು. ಹತ್ತಿರವಿದ್ದ ಕಿಟಕಿಯ ಬಾಗಿಲುಗಳು ತೆರೆ ದಿದ್ದವು. ಒಬ್ಬ ಮುದುಕಿಯು "ಹೀಗೆ ಗಾಳಿ ಬಡಿದರೆ ನಾನು ಸಾಯುವೆನು" ಎಂದು ಗೊಣಗಿಕೊಂಡು ಕಿಟಕಿಯನ್ನು ಮುಚ್ಚಿ ಬಿಟ್ಟಳು. ಕೂಡಲೇ ಇನ್ನೊಬ್ಬ ಮುದುಕಿಯು–"ಕಿಟಕಿಯ ಬಾಗಿಲುಗಳನ್ನು ಕೂಡಲೇ ತೆಗೆ, ಇಲ್ಲದಿದ್ದಲ್ಲಿ ನಾನು ಉಸಿರು ಕಟ್ಟಿ ಸಾಯುವೆನು" ಎಂದು ಚೀರಿದಳು. ಈಗ ಹೇಳಿ–ಯಾರು ಸರಿ, ಯಾರು ತಪ್ಪು ? ಅವರವರ ದೃಷ್ಟಿಯಲ್ಲಿ, ಅವರವರ ಅಗತ್ಯವನ್ನನುಸರಿಸಿ, ಇಬ್ಬರೂ ಸರಿ. ಆದುದರಿಂದ ಬೇರೆ ಬೇರೆ ಜನಾಂಗಗಳ ಸಂಸ್ಕೃತಿಯನ್ನು ಪರಿಶೀಲಿಸುವಾಗ 'ಇದು ಸರಿಯಲ್ಲ' ಎಂದು ನಾವು ನಮ್ಮ ಇಂದಿನ ವಿಚಾರ ಹಿನ್ನೆಲೆ ಯಲ್ಲಿ ತೀರ್ಮಾನಿಸಬಾರದು. ದೇಶ, ಕಾಲ, ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಸಂಸ್ಕೃತಿಯ ಮಹತ್ವವನ್ನರಿಯಬೇಕು.

## ಸಂಸ್ಕೃತಿಯ ಘಟಕಗಳು (ಅಂಗಗಳು)

ಸಂಸ್ಕೃತಿಯ ಎಲ್ಲ ಅಂಗಗಳನ್ನೂ ಗಮನಿಸುವುದು ಆಕಾಶದಲ್ಲಿರುವ ನಕ್ಷತ್ರಗಳನ್ನು ಎಣಿಸುವಷ್ಟು ಕಷ್ಟವಾದೀತು. ಲಕ್ಷಾಂತರ ವರ್ಷಗಳಿಂದ ಕೋಟ್ಯಾಂತರ ವ್ಯಕ್ತಿಗಳ ಮೂಲಕ ಹನಿಹನಿಯಾಗಿ ಕೂಡಿದ ಸಂಸ್ಕೃತಿಯನ್ನು ವಿವರವಾಗಿ ತಿಳಿಯು ವುದು ಅಸಾಧ್ಯವಾದ ಕೆಲಸ. ಆದರೆ ಸಂಸ್ಕೃತಿಯ ಪ್ರಮುಖ ಅಂಗಗಳನ್ನು ಹೀಗೆ ಸೂಚಿಸಬಹುದು—

೧. ಭೌಗೋಲಿಕ
೨. ಐತಿಹಾಸಿಕ
೩. ರಾಜಕೀಯ
೪. ಧಾರ್ಮಿಕ
೫. ವೈಜ್ಞಾನಿಕ
೬. ಕಲಾತ್ಮಕ

ಅನೇಕ ನೀರಿನ ತೊರೆಗಳು ಒಂದಾಗಿ ನದಿಯಾಗುವಂತೆ ಸಂಸ್ಕೃತಿಯು ಅನೇಕ ಬಗೆಯಲ್ಲಿ ಸಂಗ್ರಹಗೊಂಡು ನಮ್ಮ ಇಂದಿನ ಜೀವನದಲ್ಲಿ ಬೆರೆತು ಹೋಗಿರುವುದು.

## ಸಂಸ್ಕೃತಿಯು ಪ್ರಸಾರಗೊಂಡುದು ಹೇಗೆ?

ಸಂಸ್ಕೃತಿಯು ಎರಡು ಬಗೆಯಾಗಿ ಪ್ರಸಾರಗೊಳ್ಳು ವುದು. ಮೊದಲನೆಯದು ಸ್ವಭಾವಜನ್ಯವಾಗಿ, ಎರಡನೆಯದು ಶಿಕ್ಷಣ ಅಥವಾ ತರಬೇತಿಯಿಂದಾಗಿ ನಮ್ಮದಾಗುವುದು. ನಮ್ಮ ರೂಪ ಬಣ್ಣ ಆಕೃತಿಗಳು, ಆಹಾರ–ವಿಹಾರಗಳ ಬಗ್ಗೆ, ಮಾನ ಸಿಕ ರೀತಿನೀತಿಗಳು, ಆಸ್ಥೆ–ಅಭಿರುಚಿಗಳು, ತಲೆಮಾರಿನಿಂದ ತಲೆಮಾರಿಗೆ ನಮಗೆ ಜನ್ಮಸಿದ್ಧವಾಗಿ ಬರುವುವು. ಇದನ್ನು ಸ್ವಭಾವಜನ್ಯ ಎಂದು ಹೇಳುವರು. ಆಫ್ರಿಕಾ ಜನಾಂಗದವರ ದಪ್ಪತುಟಿ, ಕಪ್ಪುಬಣ್ಣ, ಗುಂಗುರು ಕೂದಲು ಆ ಜನಾಂಗಕ್ಕೆ

ಸ್ವಭಾವಜನ್ಯವಾಗಿರುವುವು. ಭಾಷೆ–ಬರಹ, ಆಚಾರ–ವಿಚಾರ, ವಿಜ್ಞಾನ–ಕಲಾಪಾಂಡಿತ್ಯ ಇವುಗಳು ಶಿಕ್ಷಣದ ನೆರವಿನಿಂದ ಜನತೆಯಲ್ಲಿ ಹರಡುವುವು. ಹೀಗೆ ಮುಖ್ಯವಾಗಿ ಎರಡು ಬಗೆಗಳಲ್ಲಿ ಸಂಸ್ಕೃತಿಯು ಜನಾಂಗದ ಜೀವನದಲ್ಲಿ ಬೆರೆತು ಪ್ರಸಾರಗೊಳ್ಳುವುದು.

## ಸಂಸ್ಕೃತಿಯ ವಿವೇಚನೆ

ಸಂಸ್ಕೃತಿಯನ್ನು ವಿವೇಚಿಸಿ ನೋಡೋಣ ಅಂದರೆ ಅದನ್ನು ಮಾನಸಿಕವಾಗಿ ಬಿಡಿಸಿ ನೋಡೋಣ. ಸಂಸ್ಕೃತಿಯನ್ನು 'ಹೃದಯದ ಒಲವು' ಮತ್ತು 'ಬುದ್ಧಿಯ ಬೆಳಕು' ಎಂದಿದ್ದಾರೆ. ಯಾವುದೇ ಒಂದು ವಿಚಾರವನ್ನು ನಾವು ನಿಷ್ಪಕ್ಷಪಾತವಾಗಿ ಗಮನಿಸಿದಾಗ ಅದು 'ಸರಿ' ಅದು 'ಹಾಗೆಯೇ' ಮತ್ತು ಅದೇ 'ಚೆನ್ನು' ಎನಿಸುತ್ತದೆ. ಅದೇ 'ಹೃದಯದ ಒಲವು', 'ಬುದ್ಧಿಯ ಬೆಳಕು' ಎಂದರೆ ನಮ್ಮ ತಿಳುವಳಿಕೆಯಿಂದ ನಮ್ಮ ಜ್ಞಾನ ಬಲದಿಂದ ಅದು 'ವಿವೇಕಪೂರ್ಣವಾಗಿದೆ', 'ಪರಿಸ್ಥಿತಿಗೆ ಅನುಗುಣವಾಗಿದೆ' ಮತ್ತು 'ಎಲ್ಲರಿಗೂ ಹಿತಕರವಾಗಿದೆ' ಎಂದು ತೀರ್ಮಾನಕ್ಕೆ ಬರುವ ವಿಚಾರವು ಆಗಿದೆ. ಇದನ್ನು ಸ್ವಲ್ಪ ತಾತ್ವಿಕವಾಗಿ ಹೇಳೋಣವೆ ?–ಸಂಸ್ಕೃತಿಯು ಬಾಹ್ಯಕ್ಕಿಂತಲೂ ಮಿಗಿಲಾಗಿ ಆಂತರಂಗಿಕ ವಿಕಾಸವಾಗಿದೆ. ಪಶುವಿನ ಸ್ಥಿತಿಯಿಂದ ಬೇರೆಯಾಗಿ ಆದರ್ಶ ಮಾನವನಾಗಲು ಮಾಡುವ ಸಾಧನೆ, ನಮ್ಮನ್ನು ನಾವು ಇನ್ನೂ ಉತ್ತಮಗೊಳಿಸಲು ಮಾಡುವ ಪ್ರಯತ್ನಗಳು, ಆಲೋಚನೆಗಳು ಮತ್ತು ಉಕ್ತಿಗಳು –ಎಲ್ಲವೂ ಸಂಸ್ಕೃತಿಯೇ.

ಯಾವುದಾದರೂ ಒಂದು ವಸ್ತುವನ್ನು ನೋಡುವಾಗ ಅದು ಚಚ್ಚೌಕ, ದುಂಡು ಅಥವಾ ಆಯಾಕಾರ ಉಳ್ಳದ್ದು

ಎಂದು ಹೇಳುತ್ತೇವೆ. ಅದೇ ರೀತಿಯಲ್ಲಿ ಸಂಸ್ಕೃತಿಯ ನೇರ ಹೇಗೆ ಎಂಬುದರ ಬಗೆಗೆ ಮುಖ್ಯವಾಗಿ ಎರಡು ಅಭಿಪ್ರಾಯ ಗಳು ಇವೆ. ಮೊದಲನೆಯದು ವ್ಯಕ್ತಿ ವಿಕಾಸ, ಎರಡನೆಯದು ಗುಂಪಿನ ಜೀವನವಿಧಾನ. ವ್ಯಕ್ತಿವಿಕಾಸ ಎಂದರೆ ಜಗತ್ತಿನ ಮಹಾಪುರುಷರು ತಮ್ಮ ಮತ್ತು ತಮ್ಮ ಜನಾಂಗದ ಪರವಾಗಿ ಜೀವನದ ಒಳಿತಿಗೆ ಎಂದು ಕಂಡುಕೊಂಡ ತತ್ತ್ವಗಳು. ಇಂಥ ವಿಕಾಸವು ಕಾಲದ ಅಳತೆಯನ್ನು ಮೀರಿದ ಹೆಜ್ಜೆಯಂತೆ ಇರು ವುದು. ಜನಸಾಮಾನ್ಯರ ದೃಷ್ಟಿಯಲ್ಲಿ ಇದು 'ಹೇಳಿದ್ದುದನ್ನು ನಂಬಿ' ನಡೆಯುವ ಹಾದಿ. ಉದಾಹರಣೆಗೆ ಮತ ಧರ್ಮಗಳು. ಗುಂಪಿನ ಜೀವನವಿಧಾನವೆಂದರೆ ಜನಾಂಗವು ಸಾಮೂಹಿಕ ಒಪ್ಪಿಗೆಯಿಂದ ತನ್ನ ಅಭಿರುಚಿಯನ್ನು ಕಂಡುಕೊಳ್ಳುವುದು. ಆ ಜನಾಂಗದ ಆ ಕಾಲದ ವ್ಯಕ್ತಿಗಳು ಆ ಸಂಪ್ರದಾಯವನ್ನು 'ತಾತನಗಂಟಿ' ನಂತೆ ತಮ್ಮ ಮುಂದಿನ ಪೀಳಿಗೆಗೆ ವರ್ಗಾಯಿ ಸುವುದು. ನಮ್ಮ ಆಹಾರ, ಉಡಿಗೆ–ತೊಡಿಗೆ, ಆಚರಿಸುವ ಹಬ್ಬಗಳು ಈ ರೀತಿಯ ವಿಕಾಸಕ್ಕೆ ಉದಾಹರಣೆಗಳು ಆಗಿವೆ. ಮನುಷ್ಯನು ತನ್ನ ಎರಡು ಕಾಲುಗಳಿಂದ ಚಲನೆಯನ್ನು ಪಡೆ ಯುವಂತೆ, ಸಂಸ್ಕೃತಿಯು 'ವ್ಯಕ್ತಿಗತ–ಸಾಮೂಹಿಕ' ಚಲನೆ ಯನ್ನು ಪಡೆದು ವಿಕಾಸಗೊಳ್ಳುವುದು.

## ಭಾರತೀಯ ಸಂಸ್ಕೃತಿ

**ಹುಟ್ಟು**

ಇಂದಿಗೆ ಸಹಸ್ರಾರು ವರ್ಷಗಳ ಹಿಂದೆ ನಮ್ಮ ರಾಷ್ಟ್ರದಲ್ಲಿ ಕವಲೊಡೆದ ನದಿಗಳ ನಡುವೆ, ಭೂ ತಾಯಿಯ ಹಸಿರು ಮಡಿಲಲ್ಲಿ ಭಾರತೀಯ ಸಂಸ್ಕೃತಿಯು ಜನಿಸಿತು. ಪಶುವಿ ನಂತೆ ಕೇವಲ ತಿಂದುಂಡು ಮಲಗಿ ಕಾಲ ಕಳೆಯುವುದು

ಅರ್ಥಹೀನತೆಯೆಂದು ತೋರಿ ಜೀವನವನ್ನು ಅರ್ಥಮಾಡಿ ಕೊಳ್ಳುವ ಮತ್ತು ಉತ್ತಮಗೊಳಿಸುವ ಪ್ರಯತ್ನಗಳು ನಡೆ ದವು. ಈ ಯತ್ನದಲ್ಲಿ ಮೊದಲ ಹೆಜ್ಜೆಯಾಗಿ ಎಂದರೆ ಮಾನ ಸಿಕ ಸಂಪರ್ಕ ಸರಿಯಾಗಿ ಏರ್ಪಡಿಸಲು ಭಾಷೆಯು ನೆರವಾಯಿತು. ಅನಂತರ ಬರಹ, ಹೆಚ್ಚಿನ ಜ್ಞಾನಸಂಚಯ, ಅವುಗಳನ್ನು ತಿಳಿಯಪಡಿಸಲು ಕಲೆಯ ವಿವಿಧ ಮುಖಗಳು ನೆರವಾದವು. ಈ ರೀತಿಯಾಗಿ ಭಾರತೀಯ ಸಂಸ್ಕೃತಿಯ ಮೂಲ ಪ್ರವಾಹವು ಜೀವನ, ಭಾಷೆ, ಸಾಹಿತ್ಯ ಮತ್ತು ಕಲೆಯ ಕಾಲುಗಳಿಂದ ತುಂಬಿ ಹರಿಯತೊಡಗಿತು.

**ಬೆಳವಣಿಗೆ**

ವೇದಕಾಲದಲ್ಲಿ ಭಾರತೀಯ ಸಂಸ್ಕೃತಿಯು ಬಹಳ ಉನ್ನತ ಆದರ್ಶಗಳನ್ನು ಮುಂದಿರಿಸಿಕೊಂಡಿದ್ದಿತು. 'ಒಡೆ ಯದ ಒಗಟು' ಆಗಿರುವ ಜೀವನವನ್ನು ಬಿಡಿಸಿ ನೋಡುವ ಕುತೂಹಲ ಅದರದು. ತನ್ನ ಅರಿವು, ತನ್ನ ಪರಿಸ್ಥಿತಿಯ ಅನು ಕೂಲ ಅನಾನುಕೂಲಗಳು, ಪ್ರಕೃತಿಯ ಅದ್ಭುತ ರಮ್ಯತೆ, ಭೀಕರ ರೂಪ, ಮಮತೆ ಮತ್ತು ಒಲವಿನ ಸೆಳೆತ–ಎಲ್ಲವನ್ನೂ ಅನುಭವಿಸಿ ಎಲ್ಲರೂ ತನ್ನವರು; ತನ್ನ ಒಳ್ಳೆಯದಕ್ಕಾಗಿ, ಎಲ್ಲರ ಹಿತಕ್ಕಾಗಿ ದುಡಿಯಬೇಕೆನ್ನುವ ಭಾವನೆ ತುಂಬಿ ಬಂದಿತು. ತನಗೆ ಬೇಕು ಎನ್ನುವುದು ತಪ್ಪಲ್ಲದಿದ್ದರೂ, ತನಗೇ ಬೇಕು ಎನ್ನುವುದು ಅಪರಾಧ; ಎಲ್ಲವೂ ತನಗಾಗಿಯೇ ಎನ್ನುವುದು ಅತ್ಯಂತ ದೊಡ್ಡ ಅಪರಾಧ ಎಂದು ಮನಗಂಡು ಇಂಥ ಸ್ವಾರ್ಥದ ವಿರುದ್ಧ ಹೋರಾಟ ನಡೆಯಿತು. ದೇವ–ದೈತ್ಯರ ಯುದ್ಧಗಳು, ಅವುಗಳಲ್ಲಿ ದೇವತೆಗಳಿಗೆ ವಿಜಯ ಸಿಗುವುದು ಇಂಥ ಭಾವನೆಯ ಸಂಕೇತವಾಗಿರುವುದು. ಒಟ್ಟಿನಲ್ಲಿ

ಸ್ವಾತಂತ್ರ್ಯ, ಸಮತೆ ಮತ್ತು ಒಗ್ಗಟ್ಟು ಜೀವನದ ಮೂಲ ಮಂತ್ರವಾದುವು. ಇದನ್ನೇ ಆಳವಾಗಿ ಆಲೋಚನೆಮಾಡಿ ವೇದ ಕಾಲದ ಮಹಾಪುರುಷರು 'ಜೀವನ ಸಫಲವಾಗಲಿ' ಎನ್ನುವ ಹೆಬ್ಬಯಕೆ ಹೊಂದಿದರು. 'ನೂರು ವರುಷದ ತುಂಬಿದ ಬಾಳು ನಿನ್ನದಾಗಲಿ' ಎಂಬುದು ಉಪನಿಷತ್ತುಗಳಲ್ಲಿಯ ಮಧುರ ಆಶೀರ್ವಾದದ ಆಗಿರುವುದು. ಉಚ್ಚ ಆದರ್ಶಗಳನ್ನು ಅನುಸರಿಸುವ ಮಹಾವಿಜ್ಞಾನಿಗಳ ಹೆಜ್ಜೆಗಳು ಕಾಲನ ಅಳತೆ ಮೀರಿ ಅವರ ಅನುಯಾಯಿಗಳಿಗೆ ನಂಬುಗೆಯ ಧರ್ಮದ ಹಾದಿಯನ್ನು ತೋರಿಸಿದವು. ವಿದ್ಯೆ, ರಕ್ಷಣೆ, ಪಾಲನೆ, ಶ್ರಮ ಇವು ಸಮಾಜದ ಮೂಲಮಂತ್ರವಾಗಿ ಸಮಾಜದ ಗುಂಪು ಹೊಣೆಗಾರಿಕೆಗೆ ಅನುವು ಮಾಡಿಕೊಟ್ಟವು. ಆಚಾರ-ಸಂಪ್ರದಾಯಗಳು ಮನುಷ್ಯನು ಮಿತಿಮೀರದ ಹಾಗೆ ಜೀವನದ ಪ್ರವಾಹಕ್ಕೆ ಎಡ ಬಲ ದಂಡೆಗಳಾದವು. ಸಮಾಜದ ಆಡಳಿತವು ರಾಜನೀತಿ, ಅರ್ಥಶಾಸ್ತ್ರ ಮುಂತಾದುವುಗಳ ಮಾರ್ಗದರ್ಶನಪಡೆದು ಲೌಕಿಕ ಸುಖಸಾಧನಗಳಾದವು. ಮಾನವತೆಯನ್ನು ಸಂಪೂರ್ಣವಾಗಿ ಸ್ಥಾಪಿಸುವ ಮಹತ್ ಪ್ರಯತ್ನವು ಈ ರೀತಿ ಮುಂದುವರೆಯಿತು.

ಜೀವನವು ಸಫಲವಾಗುವುದೆಂದರೆ ಏನು ಎನ್ನುವುದನ್ನು ತಿಳಿಯೋಣ. ನಾಣ್ಯಕ್ಕೆ ಎರಡು ಮುಖಗಳಿರುವಂತೆ ಜೀವನಕ್ಕೂ ಎರಡು ಮುಖಗಳಿವೆ. ಒಂದನೆಯದು ಮಾನವೀಯತೆಯ ಆದರ್ಶ, ನೀತಿಬದ್ಧ ಜೀವನ, ಎರಡನೆಯದು ಸಂಪೂರ್ಣ ಸುಖಪ್ರಾಪ್ತಿ. ಆದುದರಿಂದ ಜೀವನವು ಸಫಲವಾಗಬೇಕಾದರೆ ಹಿತವಾದ ಕಾರ್ಯಾಚರಣೆ, ಸುಖಸಾಧನೆಗೆ ಪ್ರಯತ್ನ, ಉದ್ದೇಶ್ಯ ಹೊಂದಲು ಪ್ರಬಲವಾದ ಆಸೆ ಮತ್ತು ಉದ್ದೇಶ್ಯ ಸಾಧನೆ ಇವುಗಳು ಅಗತ್ಯ. ಇವುಗಳನ್ನೇ ನಾವು ಧರ್ಮ, ಅರ್ಥ,

ಕಾಮ ಮತ್ತು ಮೋಕ್ಷ ಎಂದು ಶಾಸ್ತ್ರೀಕವಾಗಿ ಹೆಸರಿಸಿದ್ದೇವೆ. ಜೀವನದ ಸಫಲತೆಯಿಂದ ಸ್ವಪರಿಪೂರ್ಣತೆಯು ಸಾಧ್ಯ ಎಂದು ಭಾರತೀಯ ಮಹಾಪುರುಷರು ಮನಗಂಡರು.

ಕೆಲವು ಪಾಶ್ಚಾತ್ಯರು, ಅತಿಯಾದ ಅಧುನಿಕ ಮನೋಭಾವ ಹೊಂದಿದವರು ಭಾರತೀಯ ಸಂಸ್ಕೃತಿಯ ಸಮರ್ಥಕರನ್ನು 'ಇಂದಿಗಿಂತಲೂ ನಾಳೆಯ ಯೋಚನೆ ಮಾಡುವವರು', 'ಸಾವಿನ ನಂತರ ಬರುವ ಕಾಣದ ಲೋಕದ ಹಂಬಲವಿರುವವರು' ಅಥವಾ 'ಮುಗಿಲಿಗೆ ಏಣಿ ಹಾಕುವವರು' ಎಂಬುದಾಗಿ ಮೂಗು ಮುರಿಯಬಹುದು. ಕಾಲನ ಅಳತೆ ಮೀರಿ ಆಲೋಚನೆ ಮಾಡಿದ ಭಾರತೀಯ ಮಹಾನ್ ಪುರುಷರ ಹೇಳಿಕೆಯು ಅವರಿಗೆ ಹಾಗೆ ತೋರಿಬರುವುದರಲ್ಲಿ ಆಶ್ಚರ್ಯವೇನಿಲ್ಲ. ಏಕೆಂದರೆ ಮುಂದೆ ಆಗಬಹುದಾದುದನ್ನು ಇಂದು ನಂಬದೆ ಇರುವವರು ಎಷ್ಟೋ ಜನ. ಕೆಲವು ವರ್ಷಗಳ ಹಿಂದೆ ಓಡುವ ರೈಲನ್ನೂ, ಹಾಡುವ ತಟ್ಟೆಯನ್ನೂ, ಚಲಿಸುವ ವಿಮಾನವನ್ನೂ ನೋಡಿ, ನಂಬದೆ ಬೆದರಿದವರಿರಲಿಲ್ಲವೆ ? ಹಾಗೆ ಉಚ್ಚ ಆದರ್ಶಗಳು ಇಂದಿಗೆ ಕಲ್ಪನೆ ಆದರೂ, ನಾಳೆಗೆ ಹತ್ತಿರ ಎನ್ನುವದನ್ನು ನಿಮ್ಮ ಎಳೆಯ ಮನಸ್ಸು ಮರೆಯಬಾರದು.

ಭಾರತೀಯ ಸಂಸ್ಕೃತಿಯಲ್ಲಿ ಅತ್ಯಂತ ವಿಶಾಲಮನೋಭಾವನೆಯು ಅಡಗಿರುವುದು. ಅಹಂಕಾರತ್ಯಾಗ, ಕರುಣೆಯು ಕಂಬನಿ, ವಿಶ್ವಹಿತ, ಉಚ್ಚ ಆದರ್ಶ ಇವೆಲ್ಲವೂ ನಮ್ಮ ಸಂಸ್ಕೃತಿಯ ಜೀವಾಳ. ಸಹಸ್ರಾರು ವರ್ಷಗಳ ನಮ್ಮ ಇತಿಹಾಸದಲ್ಲಿ ಆಕ್ರಮಣ ನಡೆಸಲು ಬಂದ ಜನಾಂಗಗಳೆಷ್ಟೋ. ಶತ್ರುವಾಗಿ ಬಂದವರು ಮಿತ್ರರಾಗಿ ಇಲ್ಲಿ ಉಳಿದರು. ಒಳ್ಳೆಯ ಗುಣಗಳನ್ನು ಕೊಂಡೊಯ್ಯುವ ಭಾರತೀಯ ಸಂಸ್ಕೃತಿಯ ಹೊನಲಿನಲ್ಲಿ

ಅದೆಷ್ಟು ಕುಲಗಳು, ಗುಂಪುಗಳು, ಭಾಷೆಗಳು ಇರುವುವು ! ಒಳ ಮನಸ್ಸು ಒಂದೇ ಆಗಿರುವುದು. ಶಾಲೆಗಳು ಅನೇಕವಿದ್ದರೂ ಪರೀಕ್ಷೆಯ ಪೇಪರು ಒಂದೇ ಇರುವುದಿಲ್ಲವೆ ? ಹಾಗೆಯೇ ಅನೇಕ ಪಂಗಡಗಳಂತೆ ತೋರಿದರೂ ಎಲ್ಲವುಗಳ ಮೂಲಸಂಸ್ಕೃತಿ ಒಂದೇ. ದೀಪಾವಳಿ, ಕೃಷ್ಣಾಷ್ಟಮಿ, ರಾಮನವಮಿ ಭಾರತದ ಮೂಲೆ ಮೂಲೆಗಳಲ್ಲಿಯೂ ಸಂಭ್ರಮದಿಂದ ಆಚರಿಸಲ್ಪಡುವುದಿಲ್ಲವೆ ?

ಭಾರತೀಯ ಸಂಸ್ಕೃತಿಯ ಪ್ರವಾಹವು ಅನಾದಿ, ಅಮರ ಮಹಾಪುರುಷರ ಪ್ರಯತ್ನದಿಂದ ಮುನ್ನಡೆದ ಈ ಪ್ರವಾಹವು ಬಂಡೆಗಳ ಮೇಲೆ ಹಾರಿ ಕುಣಿದು ಸಾಗುವ ನದಿಯಂತೆ, ಕಾಲ, ದೇಶಗಳ ಘರ್ಷಣೆಗಳನ್ನು ಸಹಿಸಿ ಮುಂದುವರಿಯಿತು. ವಿದೇಶೀಯರ ಆಕ್ರಮಣಗಳು, ದೇಶದ ಒಳ ಘರ್ಷಣೆಗಳು, ಮತ-ಧರ್ಮ ವಿರೋಧಗಳು, ಸಾಮಾಜಿಕ ಅಡಚಣೆಗಳು ಎಲ್ಲವನ್ನೂ ದಾಟಿ ನಮ್ಮ ಸಂಸ್ಕೃತಿಯು ಮುಂದೆ ಸಾಗಿದೆ. ಭಾರತದ ಪ್ರತಿ ರಾಜ್ಯವೂ ತನ್ನ 'ಅಳಿಲು ಸೇವೆ'ಯನ್ನು ಈ ಪ್ರವಾಹಕ್ಕೆ ನೀಡಿದೆ, ನೀಡುತ್ತಲಿದೆ. ನಮ್ಮ ಕರ್ನಾಟಕ ರಾಜ್ಯವು ಭಾರತೀಯ ಸಂಸ್ಕೃತಿಯ ಪೋಷಣೆಗೆ ಹೇಗೆ ನೆರವಾಯಿತೆಂಬುದನ್ನು ತಿಳಿಯೋಣ.

## ಕರ್ನಾಟಕದ ಸಂಸ್ಕೃತಿಯ ಬೆಳವಣಿಗೆ

### ಪ್ರಾಚೀನ ಇತಿಹಾಸ

ಕರ್ನಾಟಕದ ಪ್ರಾಚೀನತೆಯು ಮಾನವನ ಶಿಲಾಯುಗದಷ್ಟು ಎಂದರೆ ಅನೇಕ ಸಹಸ್ರ ವರ್ಷಗಳಷ್ಟು ಹಿಂದಿನದು. ಚಿತ್ರದುರ್ಗದ ಬಳಿ ಇರುವ ಚಂದ್ರವಳ್ಳಿಯ ಕಣಿವೆಯ ಗುಹೆಗಳಲ್ಲಿ, ಮೊಳಕಾಲ್ಮೂರು ತಾಲ್ಲೂಕಿನ ಬ್ರಹ್ಮಗಿರಿಯ

ಆಸುಪಾಸಿನಲ್ಲಿ ಅಂದಿನ ಕಾಲದ ಅವಶೇಷಗಳು ಈಗಲೂ ಕಾಣಸಿಗುವುವು. ಪ್ರಾಚೀನ ಕೃತಿಗಳಾದ ರಾಮಾಯಣ ಮತ್ತು ಮಹಾಭಾರತಗಳಲ್ಲಿ ಕರ್ನಾಟಕ ಪ್ರದೇಶದ ವರ್ಣನೆಯು ಇರುವುದು. ಸುಮಾರು ೫,೦೦೦ ವರ್ಷಗಳ ಹಿಂದಿನ ಹರಪ್ಪಾ-ಮೊಹೆಂಜೋದಾರೋ ಎಂಬ ಎರಡು ಪ್ರಾಚೀನ ಪಟ್ಟಣಗಳನ್ನು ಶೋಧಿಸಿದಾಗ ಅಲ್ಲಿ ದೊರೆತ ಬಂಗಾರವನ್ನು ಖನಿಜ ಪರೀಕ್ಷೆಯ ತಜ್ಞರಾದ ಎಡ್ವಿನ್ ಪಾಸ್ಕೋರವರು ಪರೀಕ್ಷಿಸಿ ಅದು ಕರ್ನಾಟಕ ಪ್ರದೇಶದ ಗಣಿಗಳಿಂದ ಬಂದಿದ್ದಾಗಿದೆಯೆಂದು ಅಭಿಪ್ರಾಯಪಟ್ಟಿರುವರು. ಈ ರೀತಿಯಲ್ಲಿ ಕರ್ನಾಟಕವು ಬಹಳ ಹಿಂದಿನ ಕಾಲದಿಂದಲೂ ಭಾರತದ ಅತ್ಯಂತ ಮಹತ್ವದ ಅಂಶವಾಗಿದ್ದು ಭಾರತೀಯ ಸಂಸ್ಕೃತಿಯ ಆಗುಹೋಗುಗಳಲ್ಲಿ ಮುಖ್ಯಪಾತ್ರ ವಹಿಸಿರುವುದು.

**ಭೌಗೋಲಿಕ ರಚನೆ**

ಸಮುದ್ರದಲ್ಲಿ ಚಾಚಿದ ಬೆರಳಿನಂತಿರುವ ದಕ್ಷಿಣ ಭಾರತದ ಉನ್ನತ ಪ್ರದೇಶವು ಕರ್ನಾಟಕವಾಗಿದೆ. ವಿಂಧ್ಯಪರ್ವತದ ದಕ್ಷಿಣದಕಡೆಗೆ ಇರುವ ಈ ಪ್ರದೇಶವು ಗೋದಾವರಿ, ಕೃಷ್ಣ ಮತ್ತು ಕಾವೇರಿ ನದಿಗಳ ನಡುವಣದ ಫಲವತ್ತಾದ ಬಯಲನ್ನು ಹೊಂದಿ ಸಮೃದ್ಧವಾಗಿರುವುದು. ಉತ್ತರ, ದಕ್ಷಿಣ ಕನ್ನಡ ಜಿಲ್ಲೆಗಳ ಕರಾವಳಿಯು ಅನುಕೂಲವು ಇದಕ್ಕಿರುವುದು. ಒಳ್ಳೆಯ ಫಸಲು, ಹಿತವಾದ ಹವಾಗುಣ, ಉತ್ತಮ ಖನಿಜಗಳು ಇಲ್ಲಿಯ ಜನತೆಯ ಔದಾರ್ಯವನ್ನು ಹೆಚ್ಚಿಸಿ, ಸಾಂಸ್ಕೃತಿಕವಾಗಿ ಉಚ್ಚಮಟ್ಟವನ್ನು ಸಾಧಿಸಲು ನೆರವಾಗಿರುವುವು.

ಇತಿಹಾಸ

ಕ್ರಿ. ಪೂ. ಸುಮಾರು ನಾಲ್ಕನೆಯ ಶತಮಾನದಲ್ಲಿ ಮೌರ್ಯರ ಸಾಮ್ರಾಟನಾದ ಚಂದ್ರಗುಪ್ತನು ಜೈನ ಭಕ್ತನಾಗಿ ತನ್ನ ಗುರು ಶ್ರುತಕೇವಲಿ ಭದ್ರಬಾಹು ಮುನಿಯೊಡನೆ ಶ್ರವಣ ಬೆಳಗೊಳಕ್ಕೆ ಬಂದು ತನ್ನ ಕೊನೆಯ ದಿನಗಳನ್ನು ಕಳೆದನು. ಅನಂತರ ಅಶೋಕನ ಧರ್ಮವಿಜಯವು ಕರ್ನಾಟಕದಲ್ಲಿ ಚಿತ್ರ ದುರ್ಗ, ಕೊಪ್ಪಳ, ಮಸ್ಕಿ ಮುಂತಾದ ಸ್ಥಳಗಳಲ್ಲಿ ತನ್ನ ಶಾಸನ ಪತಾಕೆಯನ್ನು ಊರಿತು. ಶಾತವಾಹನರ ಕಾಲದಲ್ಲಿ ಚಿತ್ರ ದುರ್ಗದ ಚಂದ್ರವಳ್ಳಿಯು ಪ್ರಸಿದ್ಧಗೊಂಡಿತು. 'ಕುಂತಲ' ಎಂಬ ಹೆಸರನ್ನು ಕರ್ನಾಟಕವು ಪಡೆದಿದ್ದಿತು. ಕ್ರಿ. ಶ. ೩೦೦ ರಿಂದ ೬೦೦ರ ವರೆಗೆ ಬನವಾಸಿಯ ಕದಂಬರು ರಾಜ್ಯವಾಳಿದಾಗ, ಮಯೂರಶರ್ಮನ ಕಾಲದಲ್ಲಿ ರಾಜ್ಯದ ಕೀರ್ತಿಯು ಉತ್ತರ ಭಾರತದ ಗಯೆಯವರೆಗೂ ಹಬ್ಬಿತು. ಇವನ ಮರಿಮಗನಾದ ಕಕುತ್‌ಸ್ಥವರ್ಮನ ಕಾಲದಲ್ಲಿ ಗುಪ್ತರು ಮತ್ತು ವಾಕಾಟಕರಲ್ಲಿ ರಕ್ತ ಸಂಬಂಧವು ಬೆಳೆಯಿತು. ಅನಂತರ ಬಂದ ಬಾದಾಮಿಯ ಚಾಲುಕ್ಯರು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಖ್ಯಾತಿ ಗಳಿಸಿದರು. ಎರಡನೆಯ ಪುಲಕೇಶಿಯು ಲಾಟ, ಮಾಳವ ಮತ್ತು ಗುಜರಾತಗಳನ್ನು ವಶಪಡಿಸಿಕೊಂಡು, ನರ್ಮದೆಯ ದಂಡೆಯಲ್ಲಿ ಹರ್ಷಚಕ್ರವರ್ತಿಯನ್ನು ಸೋಲಿಸಿ. ದಕ್ಷಿಣಾಪಥೇ ಶ್ವರ ಎಂಬ ಬಿರುದನ್ನು ಗಳಿಸಿ, ಮೂರು ಮಹಾರಾಷ್ಟ್ರಗಳ ಅಧಿಪತಿಯಾದನು. ಯುದ್ಧದಲ್ಲಿ ಸೋತ ಹರ್ಷಚಕ್ರವರ್ತಿ ಯನ್ನು ಸ್ನೇಹ ಪ್ರೀತಿಯಿಂದ ಪುರಸ್ಕರಿಸಿ, ಕನ್ನಡಿಗರ ಉದಾರ ಭಾವವನ್ನು ತೋರಿಸಿದನು. ಪರ್ಷಿಯಾ ದೇಶಕ್ಕೆ ರಾಜಮಾತ್ಯ ನನ್ನು ಕಳುಹಿಸಿದ ಕೀರ್ತಿ ಈತನದಾಗಿದೆ. ಅದೇ ಸಮಯದಲ್ಲಿಯೇ ತಲಕಾಡಿನ ಗಂಗರು ಅಭಿವೃದ್ಧಿಗೊಂಡು ಜೈನ ಮತ್ತು ವೈದಿಕ



ಶ್ರುತಕೇವಲಿ ಭದ್ರಬಾಹುವನ್ನು ಕುರಿತ ಶಾಸನ, ಚಂದ್ರಗಿರಿಯ ಕೀರ್ತಿನಿಕೇತನ

ಸಂಸ್ಕೃತಿಯನ್ನು ಊರ್ಜಿತಗೊಳಿಸಿ, ಕಲಿಂಗ, ನೇಪಾಳ ಮುಂತಾದೆಡೆಗಳಲ್ಲಿ ತಮ್ಮ ಶಾಖೆಯನ್ನು ಸ್ಥಾಪಿಸಿದರು. ಎಂಟನೆಯ ಶತಮಾನದಲ್ಲಿ ರಾಷ್ಟ್ರಕೂಟರು ಕಾವೇರಿಯಿಂದ ಗೋದಾವರಿಯವರೆಗೆ ತಮ್ಮ ರಾಜ್ಯವನ್ನು ವಿಸ್ತರಿಸಿ ಉತ್ತರ ಭಾರತದಲ್ಲಿ ಅನೇಕ ಬಾರಿ ವಿಜಯಗಳಿಸಿದರು. ಜಲಪಡೆಯನ್ನು ಬಲಪಡಿಸಿ ಅರಬದೇಶದಂಥ ಹೊರ ರಾಷ್ಟ್ರಗಳಿಂದ ಗೌರವ ಗಳಿಸಿದರು.

ಸುಮಾರು ೧೦ನೆಯ ಶತಮಾನದಲ್ಲಿ ಪ್ರವರ್ಧಮಾನಕ್ಕೆ ಬಂದ ಕಲ್ಯಾಣ ಚಾಲುಕ್ಯರು, ಚೋಳರು, ಲಾಟರು ಮತ್ತು ಮಾಲವರನ್ನು ಸೋಲಿಸಿದರು. ೧೧ನೆಯ ಶತಮಾನದಲ್ಲಿ ಆರನೆಯ ವಿಕ್ರಮಾದಿತ್ಯನು ದಕ್ಷಿಣದ ಸಾಮ್ರಾಟನಾಗಿ 'ವಿಕ್ರಮಾಂಕ' ಎಂಬ ಹೊಸ ಶಕೆಯನ್ನು ಸ್ಥಾಪಿಸಿದನು. ಬೀದರ್ ಜಿಲ್ಲೆಯ ಜಲಸಂಗವಿ ಗ್ರಾಮದ ಮಹಾದೇವ ದೇವಾಲಯದ ಹೊರಗಿನ ಗೋಡೆಯಲ್ಲಿರುವ ಶಾಸನ ಸುಂದರಿಯು ಹಿಡಿದೆತ್ತಿರುವ ಶಾಸನದ ಶ್ಲೋಕದಲ್ಲಿ ಆರನೆಯ ವಿಕ್ರಮಾದಿತ್ಯನನ್ನು ಈ ರೀತಿ ಹೊಗಳಿದೆ :

> ಸಪ್ತದ್ವೀಪೋದರೀಭೂತಂ ಭೂತಲಂ ಸ್ವೀಕರಿಷ್ಯತಿ ।
> ಚಲುಕ್ಯೋ ವಿಕ್ರಮಾದಿತ್ಯಃ ಸಪ್ತಮೋ ವಿಷ್ಣುವರ್ಧನಃ ॥

ಅನಂತರದಲ್ಲಿ ಹೊಯ್ಸಳರು ಕೃಷ್ಣಾನದಿಯ ದಕ್ಷಿಣಕ್ಕೆ ಅಧಿಪತಿಗಳಾದರು. ಉತ್ತರಕ್ಕೆ ಗುಜರಾತಿನವರೆಗೆ ದೇವಗಿರಿಯ ಯಾದವರು ರಾಜ್ಯವಾಳಿದರು. ೧೩ನೆಯ ಶತಮಾನದ ಅಂತ್ಯದಲ್ಲಿ ಮುಸಲ್ಮಾನರು ಆಕ್ರಮಣ ಮಾಡಿದರು. ೧೪ನೆಯ ಶತಮಾನದಲ್ಲಿ ಹರಿಹರ – ಬುಕ್ಕರು ಸ್ಥಾಪಿಸಿದ



ಜಲಸಂಗವಿಯಲ್ಲಿರುವ ಮಹಾದೇವ ದೇವಾಲಯದ
ಶಾಸನಸುಂದರಿಯ ಶಿಲ್ಪ

ವಿಜಯನಗರವು ಕೃಷ್ಣದೇವರಾಯನ ಕಾಲದಲ್ಲಿ ವಿಶ್ವಖ್ಯಾತಿ ಯನ್ನು ಪಡೆಯಿತು.

ವಿಜಯನಗರದ ಪತನದನಂತರ ದಕ್ಷಿಣ ಕರ್ನಾಟಕದಲ್ಲಿ ಮೈಸೂರು ಒಡೆಯರು, ಹೈದರ್–ಟೀಪೂ ಅವರ ಆಳ್ವಿಕೆಯು ಅನುಕ್ರಮವಾಗಿ ನಡೆಯಿತು.

**ರಾಜನೀತಿ**

ಆಕ್ರಮಣ ಮಾಡುವ ಸ್ವಭಾವವೇ ಇಲ್ಲದ ಕರ್ನಾಟಕವು ಮೊದಲಿನಿಂದಲೂ ಕೇವಲ ತನ್ನ ರಕ್ಷಣೆಯಲ್ಲಿಯೇ ತೊಡ ಗಿದ್ದಿತು. ರಾಜರುಗಳು ತ್ಯಾಗಶೀಲರಾಗಿಯೂ ಶೂರ ಮುಖಂಡರಾಗಿಯೂ ಇದ್ದರು. ಶಾಸನಗಳು ಇವರನ್ನು 'ಯೋಗ್ಯರು, ಧೀರರು, ಕವಿಗಳು, ಒಳ್ಳೆಯ ಶಾಸಕರು, ಸುಂದ ರರು, ನಾಡವರು ಅಭಿಮಾನಿಗಳು' ಎಂಬುದಾಗಿ ಹೊಗಳಿವೆ. ಕ್ಷತ್ರಿಯರ ಮಾತಿರಲಿ, ಇತರರೂ ಬಹಳ ಅಭಿಮಾನಿಗಳು ಆಗಿ ದ್ದರು. ಬ್ರಾಹ್ಮಣ ಕುಮಾರ ಮಯೂರಶರ್ಮನಂಥ ಯುವ ಕನು ಪಲ್ಲವರ ದಬ್ಬಾಳಿಕೆಯನ್ನು ಸಹಿಸಲಾರದೆ ವಿರೋಧಿಸಿ ತನ್ನದೊಂದು ಸಾಮ್ರಾಜ್ಯವನ್ನೇ ಸ್ಥಾಪಿಸಿದನು. ಕಿಶೋರನಾದ ಸಳನು ಕೋಲಿನಿಂದ ಹೆಬ್ಬುಲಿಯನ್ನು ಸದೆಬಡಿದು 'ಹೊಯ್ಸಳ' (ಹೊಯ್–ಸಳ) ಎಂಬ ವೀರ ವಂಶದ ಸ್ಥಾಪಕನಾದನು. ಚಾಲುಕ್ಯರ ಎರಡನೆಯ ಪುಲಕೇಶಿಯು ಉತ್ತರ ಭಾರತದ ಸಾಮ್ರಾಟನಾದ ಹರ್ಷ ಚಕ್ರವರ್ತಿಯನ್ನು ಸೋಲಿಸಿ ಕರ್ನಾಟಕದ ಅತ್ಯಂತ ಪ್ರಖ್ಯಾತ ಅಧಿಪತಿ ಆದನು ಎಂದು ಮೊದಲೇ ಹೇಳಿದೆ. ಕೇವಲ ರಾಜರಷ್ಟೇ ಅಲ್ಲ, ತುಂಡರಸರು, ವೀರ ಯೋಧರು ಅನೇಕರು ಇದ್ದು ಅವರ ಗುಣಗಾನವನ್ನು ವೀರ ಗಲ್ಲುಗಳು ಇಂದಿಗೂ ಮಾಡುತ್ತಿವೆ.

ಆಡಳಿತ

ರಾಜನೇ ಅತ್ಯಂತ ಪ್ರಮುಖ ಅಧಿಪತಿಯಾಗಿದ್ದನು. ಸಾಮಂತರಿಗೆ ಆಂತರಿಕ ಸ್ವಾತಂತ್ರ್ಯವು ಇದ್ದಿತು. ಒಕ್ಕೂಟ ಸ್ಥಾಪಿಸುವ ಅವರ ಯೋಗ್ಯ ಮನೋಭಾವನೆಯು, ತಾವಾಗಿ ಸಹಕಾರ ನೀಡುವ ಉದಾರತೆಯು ವಿಜಯನಗರ ಕಾಲದಲ್ಲಿ ಸ್ಪಷ್ಟವಾಗಿ ಎದ್ದು ತೋರುವುದು. ಆಶ್ರಯದಾತರು ತಾಳ್ಮೆಯ ಮನೋಭಾವ ತಳೆದಿದ್ದರು. 'ಸಾಧುವಿಗೆ ಸಾಧು, ವೈರಿಗೆ ಮೃತ್ಯು'ವಾಗಿದ್ದರು. ತಮ್ಮ ವಿಶಾಲವಾದ ರಾಜ್ಯವನ್ನು ಪ್ರಾಂತ ವಾಗಿ ವಿಂಗಡಿಸಿ ರಾಜ್ಯಪಾಲರುಗಳ ನೇಮಕ ಮಾಡುತ್ತಿದ್ದರು. ನಾಡು, ವಿಷಯ ಇವುಗಳು ಪ್ರದೇಶ ವಿಭಾಗಗಳು. ಗ್ರಾಮವೇ ಅತ್ಯಂತ ಸಣ್ಣ ವಿಭಾಗವು. ಗ್ರಾಮ ಸಂಖ್ಯೆಯು ರಾಜ್ಯ ವಿಸ್ತಾರ ವನ್ನು ಸೂಚಿಸಿದ್ದಿತು–ಗಂಗವಾಡಿ ೯೬,೦೦೦, ಬನವಾಸಿ ೧೨,೦೦೦ ಇತ್ಯಾದಿ.

ಕೆಲಸದ ಗುರುತ್ವವನ್ನು ಅನುಸರಿಸಿ ಮಂತ್ರಿಗಳ ಸಂಖ್ಯೆಯು ಇರುತ್ತಿದ್ದಿತು. ಕದಂಬರ ಕಾಲದಲ್ಲಿ ಮಂತ್ರಿಗಳ ಸಂಖ್ಯೆಯು ೫ ಆಗಿದ್ದಿತು. ಮುಖ್ಯ ಮಂತ್ರಿಯು ಮಹಾ ಪ್ರಧಾನಿಯಾಗಿಯೂ, ದಂಡನಾಯಕನಾಗಿಯೂ ಇರುತ್ತಿದ್ದನು.

ಪ್ರತಿ ಹಳ್ಳಿಗೂ ತನ್ನದೇ ಆದ ಪಂಚಾಯಿತಿಯು ಇರು ತ್ತಿದ್ದಿತು. ಕದಂಬರ ಕಾಲದಲ್ಲಿ ಪ್ರತಿ ಹಳ್ಳಿಗೆ ಕನಿಷ್ಠ ಹನ್ನೆ ರಡು ಪ್ರತಿನಿಧಿಗಳಿದ್ದು, ಅವರು ತಮ್ಮ ಪ್ರದೇಶದ ವಿವಿಧ ಆಡಳಿತ ಕಾರ್ಯಗಳನ್ನೂ, ಕ್ರಮ ನಿಯಮ ಪದ್ಧತಿಗಳ ಹೊಣೆಯನ್ನು ಹೊರುತ್ತಿದ್ದರು. ಇಂಥ ಔಪಚಾರಿಕ ಸಮಿತಿ ಗಳು ಪ್ರತಿ ಹಳ್ಳಿ, ಪಟ್ಟಣ ಮತ್ತು ಪ್ರಾಂತಗಳಲ್ಲಿ ಇದ್ದು ಒರಿಯರೂ, ಮುಖ್ಯರೂ ಅವುಗಳಲ್ಲಿ ಇರುತ್ತಿದ್ದರು. ಅಲ್ಲದೆ

ಶಾತವಾಹನರ ಕಾಲದಿಂದಲೂ ವ್ಯಾಪಾರಿಗಳ ಸಂಘಗಳಾದ 'ಶ್ರೇಣಿಗಳು' ನಿಗಮ ಸಭೆಗಳೂ (ಒಕ್ಕೂಟ) ಇರುತ್ತಿದ್ದವು.

### ಧಾರ್ಮಿಕ ಜೀವನ

ಭಾರತವು ಸಾವಿರಾರು ವರ್ಷಗಳಿಂದಲೂ ಯೋಗ್ಯ ಧರ್ಮಗಳಿಗೆ 'ತೆರೆದ ಬಾಗಿಲು' ಆಗಿರುವುದು. ಇದು ಅಂಜುವ ಭಾವನೆಯ ಸೂಚಕವಲ್ಲ. ಒಳ್ಳೆಯದನ್ನು ಆದರಿಸುವ ಉತ್ತಮ ಮನೋಭಾವನೆ. ಸೌಜನ್ಯಕ್ಕೆ ಹೆಸರಾದ ನಾಡು ಇದು. ಕರ್ನಾಟಕದ ಶ್ರವಣಬೆಳಗೊಳ ಮೌರ್ಯರ ಚಂದ್ರಗುಪ್ತನಿಗೆ ಶಾಂತಿಯ ನೆಲೆಯಾಯಿತು. ಕರ್ನಾಟಕ ಜೈನ ಧರ್ಮವನ್ನು ಸ್ವಾಗತಿಸಿತು. ಕ್ರಿ. ಶ. ಹನ್ನೆರಡನೆಯ ಶತಮಾನದಲ್ಲಿ ಹೊಯ್ಸಳರ ಬಿಟ್ಟಿದೇವನು (ವಿಷ್ಣುವರ್ಧನನು) ಶ್ರೀವೈಷ್ಣವ ಮತ ಸಂಸ್ಥಾಪಕರಾದ ರಾಮಾನುಜಾಚಾರ್ಯರನ್ನು ಆದರಿಸಿ ಅವರ ಧರ್ಮವನ್ನು ಅಂಗೀಕರಿಸಿದನು. ನಮ್ಮ ನಾಡಿನಲ್ಲಿ ಹೊಸಧರ್ಮಗಳೂ ಅಂಕುರಿಸಿದವು. ಉತ್ತರ ಕರ್ನಾಟಕದಲ್ಲಿ ಬಿಜ್ಜಳರ ಕಾಲದಲ್ಲಿ ಕಲ್ಯಾಣವು ವೀರಶೈವ ಧರ್ಮದ ನೆಲೆಯಾಯಿತು. ಹದಿಮೂರನೆಯ ಶತಮಾನದಲ್ಲಿ ಉಡುಪಿಯು ಕ್ಷೇತ್ರವು ಮಾಧ್ವಮತದ ಕೇಂದ್ರವಾಗಿ ಮೆರೆಯಿತು. ಅನಂತರ ಬಂದ ದಾಸಕೂಟವು ಪುರಂದರದಾಸರಿಂದ ಸ್ಥಾಪಿಸಲ್ಪಟ್ಟು ಜನಗಳ ಮನದಲ್ಲಿ ಭಕ್ತಿಯ ಹೊನಲನ್ನು ಹರಿಸಿತು.

ನೂರಾರು ವರ್ಷಗಳಿಂದ ಕ್ರಿಶ್ಚಿಯನ್ ಧರ್ಮವು ಮೊಳೆತು ಹತ್ತೊಂಬತ್ತನೆಯ ಶತಮಾನದಲ್ಲಿ ಅತ್ಯಂತ ಉಚ್ಛ್ರಾಯ ಸ್ಥಿತಿಗೆ ಬಂದಿತು. ಮುಸಲ್ಮಾನರ ಇಸ್ಲಾಂ ಕ್ರಿ. ಶ. ಹದಿನಾಲ್ಕನೆಯ ಶತಮಾನದಲ್ಲಿ ಕರ್ನಾಟಕವನ್ನು ಪ್ರವೇಶಿಸಿತು.

ವಾಸ್ತುಶಿಲ್ಪ, ಮೂರ್ತಿಯ ಉಪಾಸನೆ

ನಮ್ಮ ಶಿಲ್ಪಸಂಪತ್ತು ಕೇವಲ ಭಾರತಕ್ಕೆ ಅಲ್ಲದೆ ವಿಶ್ವಕ್ಕೇ ಅಪೂರ್ವ ನಿಧಿಯಾಗಿರುವುದು.

ಶಾತವಾಹನರ ಕಾಲದಲ್ಲಿ ಕಲ್ಲು ಗುಹೆಗಳು, ಶಿವ, ವಿಷ್ಣು ದೇವಾಲಯಗಳು, ಗಂಗರ ಜೈನ ಬಸದಿಗಳು, ಹೊಯ್ಸಳರ ಅಪೂರ್ವ ಕಲಾ ವೈಭವ, ವಿಜಯನಗರದ ದ್ರಾವಿಡ ಸಮ್ಮಿಶ್ರಣ ಶೈಲಿಯ ಮಂದಿರಗಳು ಶಿಲ್ಪ ಕಲಾನಿಧಿಗಳಾಗಿರುವುವು.

ಚಾಲುಕ್ಯರು ಮತ್ತು ಹೊಯ್ಸಳರು ತಮ್ಮದೇ ಆದ ಹೊಸ ಶೈಲಿಯನ್ನೇ ನಿರೂಪಿಸಿರುವರು.

ಚಾಲುಕ್ಯ ಶೈಲಿಯ ದೇವಾಲಯದ ಐದು ಮುಖ್ಯ ಭಾಗ ಗಳು ಯಾವುವೆಂದರೆ–ವಿಮಾನ (ಗರ್ಭಗುಡಿ ಮತ್ತು ಸುಕ ನಾಸಿ), ಮುಖ ಮಂಟಪ, ಗೋಪುರ (ಮಹಾದ್ವಾರ), ಹಜಾರ ಮತ್ತು ದ್ವಾರ ಮಂಟಪ. ಕಗ್ಗಲ್ಲಿನಿಂದ ಮಾಡಿದ ಈ ದೇವಾ ಲಯಗಳು ತಳದಲ್ಲಿ ನಾಲ್ಕು ಮೂಲೆಗಳನ್ನು ಹೊಂದಿದ್ದು ಮೇಲ್ಭಾಗದಲ್ಲಿ ಬೌದ್ಧ ಸ್ತೂಪಗಳ ಆಕೃತಿಯನ್ನು ತಳೆದಿರು ವುವು. ವಿಗ್ರಹಗಳು ಚಾಲುಕ್ಯರ ಅಲಂಕಾರ ಪ್ರಿಯತೆಯನ್ನು ಸೂಚಿಸುವುವು.

ಹೊಯ್ಸಳರ ಶೈಲಿಯ ದೇವಾಲಯದ ಮುಖ್ಯ ಲಕ್ಷಣ ಗಳು ಇಂತಿವೆ : ಬಳಪದ ಕಲ್ಲಿನ ಕೆತ್ತನೆ ಕೆಲಸ, ವಿಮಾನ, ನವ ರಂಗ, ಮುಖಮಂಟಪ, ದ್ವಾರಮಂಟಪ, ಸಭಾಮಂಟಪ ಗಳು ಇದ್ದು, ತಳಭಾಗವು ನಕ್ಷತ್ರಾಕಾರದಲ್ಲಿ ಇರುವುದು. ಪೀಠವು ಅನೇಕ ಮೂಲೆಗಳನ್ನು ಹೊಂದಿರುವುದು. ಗೋಪು



ಗಳಗನಾಥ ದೇವಾಲಯ, ಪಟ್ಟದಕಲ್ಲು



ನಟರಾಜ, ಬಾದಾಮಿ ಗುಹಾದೇವಾಲಯ



ಚೆನ್ನಕೇಶವ ದೇವಾಲಯ, ಬೇಲೂರು



ಹೊಯ್ಸಳ ಲಾಂಛನ, ಚೆನ್ನಕೇಶವ ದೇವಾಲಯ, ಬೇಲೂರು

ರವು ಶಂಕುವಿನ ಆಕಾರದಲ್ಲಿದ್ದು ಗರ್ಭಗುಡಿಯ ಮೇಲೆ ನಿರ್ಮಿಸಲ್ಪಟ್ಟಿರುವುದು. ಭುವನೇಶ್ವರಿ ಮತ್ತು ಮದನಿಕೆಗಳಂತೂ ಹೊಯ್ಸಳರಿಗೆ ಬಹಳ ಮೆಚ್ಚುಗೆ.

ಏಕಶಿಲಾ ಬೃಹತ್ ವಿಗ್ರಹಗಳನ್ನು ಕಡೆಯುವುದರಲ್ಲಿ ಕರ್ನಾಟಕವು ಇಡೀ ಭಾರತದಲ್ಲಿಯೇ ಪ್ರಸಿದ್ಧಿ ಪಡೆದಿರುವುದು. ಇಂದಿಗೂ ಗೊಮ್ಮಟೇಶ್ವರನ ವಿಗ್ರಹವು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಡೆಯಲ್ಪಟ್ಟು ಭಾರತದ ಅನ್ಯಭಾಗಗಳಿಗೆ ಸಾಗಿಸಲ್ಪಡುವುದು.

ಕ್ರಿ. ಶ. ೯೮೩ ಗಂಗರಕಾಲದಲ್ಲಿ ಸ್ಥಾಪಿತವಾದ ಗೊಮ್ಮಟೇಶ್ವರನ ಆಕೃತಿಯು ಒಂದೇ ಶಿಲೆಯಲ್ಲಿ ಕೊರೆಯಲ್ಪಟ್ಟು ಸು. ೧೭.೦೭ಮೀ. ಎತ್ತರವಿರುವುದು. ಈಜಿಪ್ಟ್ ದೇಶದ ದೈತ್ಯಾಕೃತಿಗಳಿಗೆ ಎರಡನೆಯದಾದ ಇದು ವಿಶ್ವವಿಖ್ಯಾತವಾಗಿರುವುದು. ಕಾರ್ಕಳ, ವೇಣೂರು ಮುಂತಾದೆಡೆಗಳಲ್ಲಿಯೂ ಏಕಶಿಲಾ ಗೊಮ್ಮಟೇಶ್ವರ ವಿಗ್ರಹಗಳು ಇರುವವು. ಮೂಡಬಿದರೆಯಲ್ಲಿ 'ಒಂದರಂತೆ ಮತ್ತೊಂದು ಇಲ್ಲದ' ಸಾವಿರ ಕಂಬಗಳ ಬಸ್ತಿಯು ಇರುವುದು.

ಕರ್ನಾಟಕದ ಶಿಲ್ಪಿಗಳು ಬಂಡೆಗಲ್ಲುಗಳನ್ನಷ್ಟೇ ಅಲ್ಲ, ಬಂಡೆ ಪರ್ವತಗಳನ್ನೇ ಬಾಯಿಬಿಡಿಸಿ ಅದ್ಭುತ ಕಲೆಯನ್ನು ಪ್ರದರ್ಶಿಸಿದರು. ರಾಷ್ಟ್ರಕೂಟರ ಒಂದನೆಯ ಕೃಷ್ಣನ ಕಾಲದಲ್ಲಿ ಕೊರೆಯಲ್ಪಟ್ಟ ಎಲ್ಲೋರ ಗುಹೆಗಳು, ಕೈಲಾಸ ದೇವಾಲಯವು ವಿಶ್ವದ ಮೂಲೆ ಮೂಲೆಗಳಿಂದ ರಸಿಕರನ್ನು ಸೆಳೆಯುತ್ತಿರುವವು.

ವಿವಿಧ ಕೆತ್ತನೆಗಳ ಪರಮಸೌಂದರ್ಯವನ್ನು ಬಾದಾಮಿ ಗುಹೆಗಳಲ್ಲಿ ಕಾಣಬಹುದು. ಹಂಪೆಯ ಕಲ್ಲಿನ ರಥವು ಕಲಾಪ್ರಿಯರಿಗೆ ರಸದೌತಣವಾಗಿರುವುದು.



ಕೈಲಾಸನಾಥ ದೇವಾಲಯ, ಎಲ್ಲೋರ

**ಚಿತ್ರಕಲೆ-ವರ್ಣಕಲೆ**

ಚಿತ್ರಗಳು ಬಹಳ ಬೇಗ ನಶಿಸುವುವು. ಆದುದರಿಂದ ಪ್ರಾಚೀನ ಚಿತ್ರಗಳು, ವರ್ಣ ಆಕೃತಿಗಳು ಅಲಭ್ಯವಾಗಿರುವುವು. ಪ್ರಾಚೀನ ಸಾಹಿತ್ಯದಲ್ಲಿ, ಪದ್ಯಗಳಲ್ಲಿ ಅವುಗಳ ವರ್ಣನೆಯು ತೋರಿಬರುವುದು. ಸುಮಾರು ಏಳು ಶತಮಾನಗಳಷ್ಟು ದೊಡ್ಡ ಅವಧಿಯುವರೆಗೂ 'ಮೂಕ ದಾನ' ಮಾಡಿದ ಅದ್ಭುತ ಕಲೆಯ ಬೀಡು ಅಜಂತಾ ಗುಹೆಯು ಚಾಲುಕ್ಯ ಅರಸರ ಕೀರ್ತಿಯನ್ನು ಅಮರಗೊಳಿಸಿತು. ಮಾಸಿ ಹೋಗಿರುವ ಚಿತ್ರಗಳು, ಎಲ್ಲೋರದ ಕೈಲಾಸನಾಥ ದೇವಾಲಯ, ಬಾದಾಮಿ ಗುಹೆಗಳ ಮೇಲ್ಚಾವಣಿಯ ಒಳಭಾಗ, ಶ್ರವಣಬೆಳಗೊಳದ ಜೈನ ಮಠ, ಮೂಡುಬಿದರೆಯ ಶಿಥಿಲ ಪತ್ರಗಳು, ವಿಜಯನಗರದ ಹಂಪೆಯ ವಿರೂಪಾಕ್ಷ ದೇವಾಲಯ, ಲೇಪಾಕ್ಷಿಯ ಮಂದಿರಗಳು ಮುಂತಾದ ಎಡೆಗಳಲ್ಲಿ ತಮ್ಮ ಗತವೈಭವವನ್ನು ಸಾರುತ್ತಿರುವುವು. ಜಮಖಂಡಿಯ ಹತ್ತಿರವಿರುವ 'ಗೊಂಬಿ-ಗುಡ್ಡ' ಇಂದಿಗೂ ಸೋಜಿಗದ ವಿಷಯವಾಗಿದೆ.

ಶಾಸನಗಳಲ್ಲಿ, ಓಲೆಗಳಲ್ಲಿ ಅಕ್ಷರ ಸೌಂದರ್ಯ ಸಾಧನೆ ಚಿತ್ರಕಲೆಯ ಮಾಧ್ಯಮದಲ್ಲಿ ನಡೆದಿರುವುದು. ಹೂವುಗಳ ಉಂಡೆಯನ್ನು ಚೆಲ್ಲಿದಂತೆ ಹೊಯ್ಸಳರ ಅಕ್ಷರಗಳು ಮುದ್ದಾಗಿ, ದುಂಡಗೆ ಇರುವುವು. ಅಕ್ಷರಗಳಲ್ಲಿ ಚಿತ್ರಗಳನ್ನು ಬೊಂಬೆಗಳನ್ನು ಮೂಡಿಸು ಹಂಬಲ ಕಲೆಗಾರರಿಗೆ. ಹಂಸ ಪಕ್ಷಿಯೆಂದೇ ಭ್ರಮಿಸಲ್ಪಡುವ ಚಿತ್ರವು 'ಓ' ಅಕ್ಷರವೆಂದು ಶಾಸನವನ್ನು ಓದುವವರು ಬಿಡಿಸಿ ಹೇಳುವಾಗ ಯಾರಿಗೆ ತಾನೇ ಆಶ್ಚರ್ಯವಾಗಲಿಕ್ಕಿಲ್ಲ! ಪುರಾತನ ಓಲೆಯ ಪತ್ರದಲ್ಲಿ



ಮೂಡಬಿದರೆ ಮಠದಲ್ಲಿರುವ 'ಧವಳ' ಮತ್ತು 'ಮಹಾಧವಳ'
ತಾಡವಾಲೆ ಗ್ರಂಥಗಳ ಚಿಕಣಿ ಚಿತ್ರಗಳು

'ಗೋಗ್ರಹಣ' ಕಥೆಯ ಪೂರ್ಣ ವಿವರಗಳನ್ನು ಚಿತ್ರಕಾರ ನೊಬ್ಬನು ಬಿಡಿಸಿರುವನು.

ಶಾಂತಮುದ್ರೆಯ ಅಥವಾ ಭೀಷಣಾಕೃತಿಯ ಮರದ ಬೊಂಬೆಗಳನ್ನು ಗೋಕಾಕ ಅಥವಾ ದಕ್ಷಿಣ ಕನ್ನಡ ಜಿಲ್ಲೆಯ ಐತಿಹಾಸಿಕ ಸಂಗ್ರಹಗಳಲ್ಲಿ ಕಾಣಬಹುದು. ಬಣ್ಣ ಬಣ್ಣದ ಈ ಕಲಾಕೃತಿಗಳೂ ಚಿತ್ರಕಲೆ ಮತ್ತು ವರ್ಣವಿನ್ಯಾಸದ ಮೂಕ ಸಾಕ್ಷಿಗಳಾಗಿರುವವು.

### ಸಂಗೀತ

'ಕರ್ನಾಟಕ ಸಂಗೀತ'ವೆಂದೇ ಪ್ರಸಿದ್ಧಿಗೊಂಡ ದಾಕ್ಷಿಣಾತ್ಯ ಸಂಗೀತವು ಹಾವ-ಭಾವಗಳ ಮೇಳಕ್ಕೆ, ತಾಳ-ರಾಗಗಳ ಅಧಿಕ ಸಂಬದ್ಧತೆಗೆ ಅನುಗುಣವಾಗಿದೆ. ರಾಗ-ಆಲಾಪನೆಗಳ ಹೊಸ ಪರಂಪರೆಯನ್ನೇ ಇದು ಆರಂಭ ಮಾಡಿರುವುದು.

ದೊರೆಗಳೂ ಸಂಗೀತಜ್ಞರೂ ಸಂಗೀತ ಆರಾಧಕರೂ ಆಗಿದ್ದರು. ಕ್ರಿ. ಶ. ಹನ್ನೆರಡನೆಯ ಶತಮಾನದ ವೀರಬಲ್ಲಾಳನು 'ಸಂಗೀತಪ್ರಸಂಗಭಂಗಿ' ಎಂಬ ಬಿರುದು ಪಡೆದಿದ್ದನು. ದೇವಗಿರಿಯ ಪ್ರಸಿದ್ಧ ಸಂಗೀತಪಟು ಗೋಪಾಲ ನಾಯಕನು ದಕ್ಷಿಣಾದಿ ಸಂಗೀತವನ್ನು ಅರಿಯದ ಅಲ್ಲಾವುದ್ದೀನ ಖಿಲ್ಜಿಯ ಅಸ್ಥಾನದಲ್ಲಿ ಫಾರಸೀ ಸಂಗೀತಜ್ಞ ಅಮೀರ್ ಖುಸ್ರೋವಿನೊಡನೆ ಸ್ಪರ್ಧಿಸಿ ಗೌರವ ಆದರಗಳನ್ನು ಪಡೆದನು. ಹನ್ನೆರಡನೆಯ ಶತಮಾನದಲ್ಲಿಯೇ 'ಕರ್ನಾಟ' ಎಂಬ ರಾಗವು ಪ್ರಸಿದ್ಧಿ ಪಡೆದಿದ್ದಿತು. ವಿಜಯನಗರ ಕಾಲದಲ್ಲಿ ಸಂಗೀತವು ಮಹೋನ್ನತಿಗೈದಿತು.

ಕರ್ನಾಟಕ ಸಂಗೀತ ಶಿರೋಮಣಿಗಳಾದ ಪುರಂದರದಾಸರು 'ದಾಸಕೂಟವನ್ನು ಸ್ಥಾಪಿಸಿ ವೈಷ್ಣವ ಭಕ್ತಿಯ ಹೊಸ ಸಂಪ್ರದಾಯವನ್ನು ಹಾಕಿಕೊಟ್ಟರು. ಲಕ್ಷಾಂತರ ಸಂಖ್ಯೆಯಲ್ಲಿ ಇವರ

ಸುಲಭ, ಸರಳ ಭಕ್ತಿಗೀತೆಗಳನ್ನು ಇಂದಿಗೂ ಹಾಡುತ್ತಾರೆ. ಹದಿನಾರನೆಯ ಶತಮಾನದವರಾದ ಇವರು ಲಘುತಾಳವನ್ನವಲಂಬಿಸಿ ೩೫ ಸುಲಭ ಕ್ರಮದ ತಾಳಗಳನ್ನು ಸಂಶೋಧನೆ ಮಾಡಿ ಕರ್ನಾಟಕ ಸಂಗೀತದ ಪಿತಾಮಹರೆನಿಸಿಕೊಂಡರು. ಕರ್ನಾಟಕದ ಪ್ರಮುಖ ತಾಳಗಳಾದ ಆದಿತಾಳ, ಝಂಪತಾಳ, ರೂಪತಾಳ, ಮಿಶ್ರಚಾಪುತಾಳ, ಖಂಡಚಾಪುತಾಳ ಇತ್ಯಾದಿ ಪ್ರಸಿದ್ಧಗೊಂಡವು. ಐದು ಲಕ್ಷಗಳಷ್ಟು ಪದಗಳು, ಸುಳಾದಿಗಳು, ಉಗಾಭೋಗಗಳ ಮೂಲಕ ಸಂಗೀತದ ಸೆಳವಿಗೆ ಭಕ್ತಿಯ ಹೊನಲನ್ನು ತಿರುಗಿಸಿದರು. ಇವರ ಮಾಯಾಮಾಲವಗೌಳ ಮೇಳವು ಸಂಗೀತವನ್ನು ಶ್ರೇಣಿಬದ್ಧಗೊಳಿಸುವುದರಲ್ಲಿ ಯಶಸ್ವಿ ಆಯಿತು.

ಕರ್ನಾಟಕ ಸಂಪ್ರದಾಯದ ವಿಶಿಷ್ಟ ಸಂಪ್ರದಾಯವು ಗಮಕ ಕಲೆಯಾಗಿರುವುದು. ಸಂಗೀತ–ಪದ್ಯಗಳ ಅಪೂರ್ವ ಹೊಂದಾಣಿಕೆಯೇ ಗಮಕದ ಜೀವಾಳ. ಕರ್ನಾಟಕದ ಹೆಮ್ಮೆಯ ಸಂಪತ್ತಾಗಿರುವ ಗಮಕ ಕಲೆಯನ್ನು ಸಾಧಿಸಿಕೊಳ್ಳುವವರು ಧನ್ಯರೇ ಸರಿ.

### ನಾಟಕ, ನೃತ್ಯಕಲೆ

ಕ್ರಿ. ಶ. ಎರಡನೆಯ ಶತಮಾನದ ಆದಿಯಲ್ಲಿಯೇ ಕರ್ನಾಟಕದ ದೊರೆಗಳು 'ನೃತ್ಯ' ಕಲೆಯ ಪ್ರಶಂಸಕರಾಗಿದ್ದರು. ಪಟ್ಟದಕಲ್ಲಿನ ಶಾಸನವು ನಟಸೇವ್ಯನನ್ನು ಕೊಂಡಾಡಿ, ಶಾಸ್ತ್ರೀಯ ನಾಟ್ಯಕಲೆಯನ್ನು ಗೌರವಿಸಿತು. ಎಲ್ಲಿ ನೋಡಿದರೂ ದೇವಾಲಯಗಳ ಹೊರಮೈ, ಒಳಮೈಗಳು ತರತರಹೆಯ ಸುಂದರ ನೃತ್ಯ ಭಂಗಿಗಳಿಂದ ಕೂಡಿರುವುವು. ಹೊಯ್ಸಳದೊರೆ ವಿಷ್ಣುವರ್ಧನನ ರಾಣಿಯಾದ ಶಾಂತಲಾ ದೇವಿಯು ಪ್ರಸಿದ್ಧ ನರ್ತಕಿ. ವಿಜಯ

ನಗರ ಕಾಲದಲ್ಲಿ ಉಚ್ಚಕುಲದ ಯುವತಿಯರ ನೃತ್ಯವನ್ನು ಅಭ್ಯಸಿಸಿದ್ದರು.

ಬಯಲಾಟ ಮತ್ತು ಯಕ್ಷಗಾನಗಳಲ್ಲಿ ಸಂಗೀತ, ನೃತ್ಯ ಸಂವಾದಗಳು ಹಾಸುಹೊಕ್ಕಾಗಿ ಸೇರಿರುವುವು. ಯಕ್ಷಗಾನವು ವಿಶೇಷವಾಗಿ ದಕ್ಷಿಣ ಕನ್ನಡ ಜಿಲ್ಲೆಯ ಕಲಾಸಂಪತ್ತು ಆಗಿರುವುದು.

ಸಾಹಿತ್ಯ

ಕನ್ನಡ ಸಾಹಿತ್ಯವು ಭಾರತದ ಅತ್ಯಂತ ಪ್ರಾಚೀನ ಸಾಹಿತ್ಯಗಳಲ್ಲಿ ಒಂದು. ಎರಡು ಸಾವಿರ ವರ್ಷಗಳಿಗೂ ಮೀರಿದ ಅದರ ಬೆಳವಣಿಗೆಯು ಅಪಾರ ಕೃತಿಸಂಪತ್ತನ್ನು ಪಡೆದಿರುವುದು. ಕ್ರಿ. ಶ. ಐದನೆಯ ಶತಮಾನದ ಹಲ್ಮಿಡಿ ಶಾಸನವು ಹಳೆಗನ್ನಡ ಸಾಹಿತ್ಯದ ಪೂರ್ವಸ್ಥಿತಿಯನ್ನೂ ಮತ್ತೊಂದು ಶಾಸನದ ಪದ್ಯದ ತುಂಡೊಂದು ಕನ್ನಡ ಸಾಹಿತ್ಯದ ಬಿಗಿ ಶೈಲಿಯ ಪರಿಚಯವನ್ನೂ ನೀಡುವುವು. ಕ್ರಿ. ಶ. ಏಳನೆಯ ಶತಮಾನದ ಜೈನತತ್ತ್ವಗಳ ನಿರೂಪಣೆ ಮಾಡುವ 'ಚೂಡಾಮಣಿ'ಯು ೯೬,೦೦೦ ಪದ್ಯಗಳನ್ನು ಒಳಗೊಂಡಿರುವುದು. ಕ್ರಿ. ಶ. ಒಂಬತ್ತನೆಯ ಶತಮಾನದ ರಾಷ್ಟ್ರಕೂಟ ನೃಪತುಂಗನ 'ಕವಿರಾಜಮಾರ್ಗ'ವು ಕನ್ನಡ ಸಾಹಿತ್ಯದ ಪ್ರಾಚೀನ ಸಂಪತ್ತು ಆಗಿರುವುದು. ಇಲ್ಲಿಯವರೆಗೆ ದೊರೆತ ಪ್ರಾಚೀನ ಗ್ರಂಥಗಳಲ್ಲಿಯೂ 'ಪಳಗನ್ನಡ', 'ಪುರಾತನ ಕವಿ', 'ಪೂರ್ವಾಚಾರಗಳು', 'ಗದ್ಯ ಪದ್ಯ ರಚನಾಕಾರರು'—ಇವುಗಳ ಉಲ್ಲೇಖ ಮತ್ತು ಪ್ರಶಂಸೆ ತೋರಿಬರುವುದು.

ಜೈನರ ಕಾಲದಿಂದಲೂ ದೇಶ ಭಾಷೆಯು ಅಗತ್ಯ ಬಹಳವಾಗಿದ್ದಿತು, ಸಮಾಜದ ಎಲ್ಲ ಪದರುಗಳಲ್ಲಿಯೂ ಹೋಗುವ ಈ ಮಾಧ್ಯಮವು ಜನಪ್ರಿಯ ಸಂಸ್ಕೃತ ಭಾಷೆಯ ಅವುಚಿಕೆ

ಯನ್ನು ದಾಟಿಕೊಂಡು ಕಲ್ಲಿನಲ್ಲಿಯೂ ನೀರು ಹೊರಸೂಸುವಂತೆ ಮುಂದುವರಿಯಿತು. ಕ್ರಿ. ಶ. ಹತ್ತನೆಯ ಶತಮಾನದಿಂದ ಅದರ ವೇಗವಂತೂ 'ನಾಗಾಲೋಟ'ವೇ. ಪಂಪಭಾರತ, ಆದಿ ಪುರಾಣ, ರಾಮಕಥೆ, ಚಾವುಂಡರಾಯಪುರಾಣ ಮುಂತಾದ ಉತ್ತಮ ಕೃತಿಗಳ ಆಗಮನದೊಡನೆ ಕನ್ನಡ ಸಾಹಿತ್ಯದ ವೈಶಿಷ್ಟ್ಯವೆನಿಸಿದ ಚಂಪೂ ಪದ್ಧತಿಯು (ಗದ್ಯ ಪದ್ಯಗಳ ಅನುಕ್ರಮವಾದ ಸಮ್ಮಿಶ್ರಣ) ಬಳಕೆಗೆ ಬಂದಿತು. ಲೌಕಿಕ, ಆಗಮಿಕ, ವಿಷಯಗಳು ಹೊಸ ಗ್ರಂಥಗಳ ನಿರ್ಮಾಣಕ್ಕೆ ಎಡೆಗೊಟ್ಟಿದ್ದವು.

ಕ್ರಿ. ಶ. ಹದಿಮೂರನೆಯ ಶತಮಾನದ ಸಮಯಕ್ಕೆ ವೀರಶೈವ ಸುಧಾರಕರು ವಚನಸಾಹಿತ್ಯವನ್ನು ಜನತೆಗೆ ನೀಡಿದ್ದಾರೆ. ವಿಶೇಷ ಶಿಕ್ಷಣ ಅಥವಾ ಸಾಹಿತ್ಯ ತರಬೇತಿಯಿಲ್ಲದಿದ್ದರೂ, ಇವರ ಸರಳ, ಶಕ್ತಿಯುತ ಕನ್ನಡ ಗದ್ಯವು ಕನ್ನಡ ಸಾಹಿತ್ಯಕ್ಕೇ ಹೊಸ ಕಳೆಯನ್ನು ತಂದಿತು. ರಗಳೆ, ಷಟ್ಪದಿಗಳು ಬಹಳ ಜನಪ್ರಿಯತೆಯನ್ನು ಗಳಿಸಿದವು.

ಸಾಹಿತ್ಯದ ಸ್ವರ್ಣಯುಗವೆನಿಸಿದ ವಿಜಯನಗರ ಕಾಲದಲ್ಲಿ ಎಲ್ಲ ಧರ್ಮಗಳೂ ಉನ್ನತಿಗೊಂಡು ಕನ್ನಡದ 'ಬೊಕ್ಕಸ'ವನ್ನು ತುಂಬಿದವು. ಕುಮಾರವ್ಯಾಸನ ಅಪೂರ್ವ ಧೋರಣೆ, ವರ್ಣನಾಕ್ರಮ ಮತ್ತು ಭಾಮಿನೀ ಷಟ್ಪದಿಯ ಪ್ರಯೋಗ ಅದ್ಭುತ ಮೆಚ್ಚುಗೆಯನ್ನು ಪಡೆಯಿತು. ಪುರಂದರದಾಸರು ಸುಮಾರು ಐದು ಲಕ್ಷ ಪದ್ಯಗಳನ್ನು ಸುಶ್ರಾವ್ಯವಾಗಿ ಶಾಸ್ತ್ರೋಕ್ತವಾಗಿ ಹಾಡಿ ಅಮರ ಕೀರ್ತಿಗಳಿಸಿದರು. ಕವಿ ಲಕ್ಷ್ಮೀಶನ ಜೈಮಿನಿ ಭಾರತವು ಷಟ್ಪದಿಯಲ್ಲಿ ಇಂದಿಗೂ ರಸಿಕರ ಕೂಟದಲ್ಲಿ ಹಾಡಲ್ಪಡುತ್ತಿದೆ. ಪುರಂದರದಾಸರ ನಂತರ

ಭಾವ-ನಾದಗಳನ್ನು ಕೂಡಿಸಿ, ಕನ್ನಡ ಜಗತ್ತನ್ನು ಸಂಗೀತ
ಮಯ ಮಾಡಿದುದು ಈ ಕೃತಿಯೇ.

ಕ್ರಿ. ಶ. ಹದಿನೇಳನೆಯ ಶತಮಾನದಲ್ಲಿ ಮೈಸೂರು ಅರ
ಸರುಗಳ ಆಳ್ವಿಕೆಯಲ್ಲಿ ತಿರುಮಲರಾಯ, ಚಿಕುಪಾಧ್ಯಾಯ
ಮುಂತಾದವರು ಕನ್ನಡ ಸಾಹಿತ್ಯಸಂಪತ್ತನ್ನು ಅಭಿವೃದ್ಧಿ
ಗೊಳಿಸಿದರು. ಶ್ರೀವೈಷ್ಣವ ಸಾಹಿತ್ಯದಲ್ಲಿ ಮೂವತ್ತಕ್ಕೂ
ಹೆಚ್ಚಿನ ಸಂಖ್ಯೆಯಲ್ಲಿ ಗ್ರಂಥಗಳು ರಚಿಸಲ್ಪಟ್ಟವು. ಕನ್ನಡ
ಅಮರ ಕವಿ ಸರ್ವಜ್ಞನು ನೂರಾರು ತ್ರಿಪದಿಗಳಲ್ಲಿ ತನ್ನ
ಜಾಣ್ಮೆ ಮತ್ತು ಚಾಣಾಕ್ಷತನದ ಸ್ಪರ್ಧೆಯನ್ನು ನಡೆಸಿರುವನು.
ಕ್ರಿ. ಶ. ಹದಿನೆಂಟನೆಯ ಶತಮಾನದಲ್ಲಿ ಜನಪದ ಸಾಹಿತ್ಯದ
ಅಂಗವಾದ ಯಕ್ಷಗಾನವು ವಿಶೇಷ ಅಭಿವೃದ್ಧಿಯನ್ನು
ಹೊಂದಿತು. ಕ್ರಿ. ಶ. ಹತ್ತೊಂಬತ್ತನೆಯ ಶತಮಾನದ ಅಂತ್ಯ
ದಲ್ಲಿ ಕವಿ ಮುದ್ದಣ್ಣನು ಹಳೆಯ ಶೈಲಿಯನ್ನು ಅನುಸರಿಸಿ
ವಿಚಾರಧಾರೆಯನ್ನು ರಾಮಾಶ್ವಮೇಧ'ದ ಮೂಲಕ ಜನತೆಯು
ಮುಂದಿರಿಸಿದನು. ನಿಲ್ದಾಣದಲ್ಲಿ ಚಲಿಸುವ ರೈಲು ಅತ್ತ ಸರಿದು
ಹೊಸ ಮಾರ್ಗವನ್ನು ಹಿಡಿಯುವಂತೆ, ಕನ್ನಡ ಸಾಹಿತ್ಯವು
ಆಧುನಿಕ ಕ್ಷೇತ್ರಕ್ಕೆ ಹೊಂದಿಕೊಂಡು ಮುಂಬರಿಯಿತು.

ಆಧುನಿಕ ಕನ್ನಡ ಕಾವ್ಯಕ್ಷೇತ್ರದಲ್ಲಿ ಮೊದಲಿಗರೆಂದರೆ
ಡಿ. ವಿ. ಗುಂಡಪ್ಪ, ಬಿ. ಎಂ. ಶ್ರೀಕಂಠಯ್ಯ, ಮಾಸ್ತಿ ವೆಂಕ
ಟೇಶ ಐಯ್ಯಂಗಾರ್, ಪಂಜೆ ಮಂಗೇಶರಾವ್, ದ.ರಾ. ಬೇಂದ್ರೆ
ಶಿವರಾಮ ಕಾರಂತ, ವಿ.ಸಿ., ಕುವೆಂಪು, ಪು. ತಿ. ನರಸಿಂಹಾ
ಚಾರ್ ಮೊದಲಾದ ಕವಿಗಳು. ಜಿ. ಪಿ. ರಾಜರತ್ನಂರವರು
ಅನುಕರಿಸಲಾಗದ 'ಮುತ್ತಿನ' ಹೊಸ ಸೃಷ್ಟಿಯನ್ನು ಮಾಡಿರು
ವರು.

ಕನ್ನಡ ಕತೆಗಳನ್ನು ಬರೆಯುವವರಲ್ಲಿ ಹುಟ್ಟು ಕತೆಗಾರ

ರಾದ ಮಾಸ್ತಿ, ಗೊರೂರು ರಾಮಸ್ವಾಮಿಯಂಗಾರ್, ಅ.ನ.ಕೃ. ಮುಂತಾದವರು ಪ್ರಸಿದ್ಧರು. ಐತಿಹಾಸಿಕ ಕಾದಂಬರಿಕಾರರಾದ ಗಳಗನಾಥರು, 'ಸಮರಸವೇ ಜೀವನ'ವೆಂದ ವಿ ಕೃ. ಗೋಕಾಕ, 'ಮರಳಿ ಮಣ್ಣಿಗೆ' ತಂದ ಶಿವರಾಮ ಕಾರಂತರು–ಇವರುಗಳನ್ನು ಕನ್ನಡ ಜಗತ್ತು ಮರೆಯುವಂತಿಲ್ಲ. ಮನೋಹರ ಗ್ರಂಥಮಾಲಿಕೆಯಂಥ ಅನೇಕ ಸಂಸ್ಥೆಗಳು ಕನ್ನಡದ ಬೊಕ್ಕಸವನ್ನು ತುಂಬಿಸುತ್ತಲಿವೆ.

ಟಿ.ಪಿ. ಕೈಲಾಸಂರವರ 'ಟೊಳ್ಳುಗಟ್ಟಿ'ಯಲ್ಲಿ ಇಂಗ್ಲಿಷ್—ಕನ್ನಡ ಸರಿಸಮಾನ ಪ್ರಯೋಗವು ನಡೆದು ಕನ್ನಡ ನಾಟಕ ಸಾಹಿತ್ಯಕ್ಕೆ ಆಧುನಿಕ ಮೆರುಗನ್ನು ನೀಡಿತು. ಶ್ರೀರಂಗರು ನಾಟಕಗಳನ್ನು ಬರೆದು ಸಮಾಜಕ್ಕೆ ಕನ್ನಡಿ ಹಿಡಿದರು. ಏಕಾಂಕ ನಾಟಕಗಳನ್ನು ಬರೆದವರಲ್ಲಿ ಅ. ನ. ಕೃ., ದ. ರಾ. ಬೇಂದ್ರೆ ಮತ್ತು ಶ್ರೀರಂಗರು ಹೆಸರಾಂತರಾಗಿರುವರು,

## ಭಾರತೀಯ ಸಂಸ್ಕೃತಿಗೆ ಕನ್ನಡದ ಕೊಡುಗೆಯೇನು?

ಕರ್ನಾಟಕದ ಶಿಲಾಯುಗವನ್ನು ಪ್ರಾಗೈತಿಹಾಸಿಕವೆಂದೂ, ಪುರಾಣಗಳನ್ನು ಅಸ್ಫುಟವೆಂದೂ, ಸಿಂಧೂ ಸಭ್ಯತೆಯ ಸಂಶೋಧನೆಯು ಅಪೂರ್ಣವೆಂದೂ ಹೊರತು ಪಡಿಸುವುದಾದರೆ ಕರ್ನಾಟಕ ಸಂಸ್ಕೃತಿಯ ಆಗುಹೋಗುಗಳನ್ನು ಸುಮಾರು ಎರಡು ಸಾವಿರ ವರ್ಷಗಳ ಹಿಂದಿನದಾಗಿ ತಿಳಿಯಬಹುದು.

ಕ್ರಿ.ಪೂ. ನಾಲ್ಕನೆಯ ಶತಮಾನದಲ್ಲಿ ಜೈನ ಭಕ್ತನಾದ ಮೌರ್ಯ ಚಕ್ರವರ್ತಿ ಚಂದ್ರಗುಪ್ತನಿಗೆ ಕರ್ನಾಟಕವು

ಮನಶ್ಶಾಂತಿಯನ್ನು ನೀಡಿ ಪ್ರಜಾಪೋಷಣೆಗೈದಲ್ಲಿ ನೆರವಾಯಿತು. ಅನಂತರ ಶಾತವಾಹನರ ಸಾಮ್ರಾಜ್ಯವಾದ ಇದು ಕ್ರಿ. ಶ. ನಾಲ್ಕನೆಯ ಶತಮಾನದಿಂದ ಬನವಾಸಿಯ ಕದಂಬರ ಅಭಿವೃದ್ಧಿಯನ್ನು ಕಂಡಿತು. ಉತ್ತರ ಭಾರತದಲ್ಲಿ ಗುಪ್ತರಿದ್ದರೆ ಹಗೆ ಮೆಟ್ಟುಗ್ಗಿದ ಮಯೂರಶರ್ಮನನ್ನು ಕಂಡು ಕನ್ನಡ ಧೀರರ ರಕ್ತಸಂಬಂಧಿಕರಾಗಿ ಗುಪ್ತರು ಮತ್ತು ವಾಕಾಟಕರು ಹಾತೊರೆದರು. ಒಂದು ಕಡೆಗೆ ಬಾದಾಮಿ ಚಾಲುಕ್ಯರು ಅಂತರ ರಾಷ್ಟ್ರೀಯ ಖ್ಯಾತಿ ಪಡೆದರೆ ಮತ್ತೊಂದು ಕಡೆ ತಲಕಾಡಿನ ಗಂಗರು ತಮ್ಮ ಶಾಖೆಗಳನ್ನು ಕಲಿಂಗ ದೇಶಗಳಲ್ಲಿ ಸ್ಥಾಪಿಸಿದರು. ಗುಜರಾತಿನ ಯುದ್ಧಗಳಲ್ಲಿ ಕನ್ನಡನಾಡಿನ ಕೀರ್ತಿಯನ್ನು ಹರಡಿದರು. ಮೂಲೆಯ ದ್ವೀಪಗಳಲ್ಲಿಯೂ ಗಂಗ ವಂಶದವರ ಶಾಸನವಿದ್ದಿತು. ಕ್ರಿ. ಶ. ಏಳನೆಯ ಶತಮಾನದಲ್ಲಿ ಎರಡನೆಯ ಪುಲಕೇಶಿಯು ಪರ್ಷಿಯದವರೆಗೂ ತನ್ನ ಸಂಸ್ಕೃತಿಯ ಹೊನಲನ್ನು ಹರಿಸಿದನು. ರಾಷ್ಟ್ರಕೂಟ ನೌಕಾ ಸೈನ್ಯದ ಅರಬರ ಮೆಚ್ಚುಗೆ ಪಡೆಯಿತು.

ಕನ್ನಡನಾಡಿನ ಧೀರರ ಬಗೆಗೆ ಹ್ಯೂಯನ್‌ತ್ಸಾಂಗನು ತುಂಬು ಮನಸ್ಸಿನಿಂದ ಮೆಚ್ಚುಗೆಯನ್ನು ಸೂಚಿಸಿದ್ದಾನೆ. ಇವರನ್ನು 'ಕೆಣಕಿದವನು ಉಳಿಯಲಾರನು' ಎಂದಿರುವನು. 'ಸಾಧುವಿಗೆ ಸಾಧು' ಆಗಿ ಇರುವ ಕನ್ನಡಿಗರು, ಕೆಣಕಿದ ಶತ್ರುವಿಗೆ ಮೃತ್ಯುವಾಗಬಲ್ಲವರಾಗಿದ್ದರು.

ಯಾವ ಭಾರತೀಯನೂ ವಿಜಯನಗರದ ಸಾಮ್ರಾಜ್ಯಶ್ರೀಯನ್ನು ಮರೆಯಲಾರರು. ಮುಸಲ್ಮಾನರ ಆಕ್ರಮಣಕ್ಕೆ ಬಲಿಯಾಗಿ ಜರ್ಜರಿತವಾಗುತ್ತಿದ್ದ ಭಾರತವನ್ನು, ಭಾರತದ ಸಂಸ್ಕೃತಿಯನ್ನು ವಿಜಯನಗರವು ಉಳಿಸಿತು. ಶಿಥಿಲಗೊಂಡ ದೇಶಾಭಿಮಾನವನ್ನು ಮತ್ತೆ ದೃಢಗೊಳಿಸಿತು. ಒಗ್ಗ

ಟ್ಟಿನ ಬಲವನ್ನು ತೋರಿಸಿ ಆಕ್ರಮಣಕಾರರು ಮತ್ತೆ ತಿರುಗಿ ನೋಡದಂತೆ ಮಾಡಿತು. ಭಾರತೀಯ ಸಂಸ್ಕೃತಿಯನ್ನು ಪುನರುಜ್ಜೀವನಗೊಳಿಸಿತು. ವಿಜಯನಗರದ ದೇಶಾಭಿಮಾನದ ಕಿಚ್ಚು ಅನಂತರ ಬಂದ ಶಿವಾಜಿಯಂಥ ಮಹಾಪುರುಷರಿಗೆ ಸ್ಫೂರ್ತಿಯನ್ನು ನೀಡಿ ಮಹಾರಾಷ್ಟ್ರ ನಿರ್ಮಾಣಕ್ಕೆ ಎಡೆ ಮಾಡಿಕೊಟ್ಟಿತು. ವಿಜಯನಗರವು ಅಳಿದರೂ ಅದು ಮೂಡಿಸಿದ ದೇಶಾಭಿಮಾನವು ಉಳಿಯಿತು. ಕೆಲ ಸಮಯದ ನಂತರ ನೇಪಾಳ, ಬಂಗಾಳದಲ್ಲಿ ಕರ್ನಾಟಕ ಅರಸು ಶಾಖೆಯು ಮುಂದುವರಿಯಿತು. ನಾನ್ಯದೇವ, ಸೇನ ಮುಂತಾದವರು ಕರ್ನಾಟಕದವರೇ ಆಗಿದ್ದರು. ಗಹಡವಾಲರು, ಜೋಧಪುರದ ರಾಠೋಡರು, ಪೂರ್ವ ಬಂಗಾಳದ ಬಾರಭುಜ್ಯರು, ಸೇನರು ಮಲಯ ದ್ವೀಪದ ಗಂಗ ದೊರೆಗಳು ಕರ್ನಾಟಕದ ಧೀರ ಅರಸರಾಗಿದ್ದರು.

'ಅದು ಮುಟ್ಟಿದ ಸೊಪ್ಪಲ್ಲ' ಎನ್ನುವಂತೆ ಕರ್ನಾಟಕವು ಕಾಣದ ಮತಧರ್ಮಗಳಿಲ್ಲ. ಮೌರ್ಯ ಚಂದ್ರಗುಪ್ತನ ಜೈನ ಧರ್ಮವೂ, ಸಾಮ್ರಾಟ ಅಶೋಕನು ಮೆಟ್ಟಿದ ಬೌದ್ಧ ಧರ್ಮವೂ, ಸ್ವಲ್ಪ ಸಮಯದವರೆವಿಗೆ ಜನಪ್ರಿಯವಾದರೂ, ಕರ್ನಾಟಕವು ತನ್ನದೇ ಆದ ಧರ್ಮಗಳನ್ನು ಕಂಡುಕೊಂಡು ರಾಷ್ಟ್ರದ ಹೊರಭಾಗಗಳಿಗೂ ಪ್ರಸಾರಗೊಂಡಿತು. ಕ್ರಿ. ಶ. ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ ವೀರಶೈವ ಮತವು ಆರಂಭಗೊಂಡು ಭಾರತದ ಅನೇಕ ಕಡೆಗಳಲ್ಲಿ ಪ್ರಸಾರಗೊಂಡಿತು. ಕ್ರಿ. ಶ. ಹದಿಮೂರನೆಯ ಶತಮಾನದ ಮಧ್ಯಭಾಗವು ದ್ವೈತಮತ ಸಿದ್ಧಾಂತದ ಪ್ರತಿಪಾದಕನಾದ ಮಾಧ್ವಮತ ಧರ್ಮವು ಉಡುಪಿಯಲ್ಲಿ ಸ್ಥಾಪಿತಗೊಂಡಿದ್ದನ್ನು ಕಂಡಿತು. ಮಧ್ವಾಚಾರ್ಯರ ಶಿಷ್ಯರಾದ ನರಹರಿ ತೀರ್ಥರು

ಒರಿಸ್ಸಾ ರಾಜಕುಮಾರನ ಆಡಳಿತ ಪ್ರತಿನಿಧಿಯಾಗಿದ್ದರು. ಈ ಸಂಪ್ರದಾಯದ ಹಿಳನೆಯ ತಲೆಮಾರಿನವರಾಗಿ ಚೈತನ್ಯರು ಬಂಗಾಳದ ಮೂಲೆ ಮೂಲೆಗಳಲ್ಲಿ ವೈಷ್ಣವ ಭಕ್ತಿಸುಧೆಯನ್ನು ಸುರಿಸಿದರು. ಈ ರೀತಿ ವೈದಿಕ ಮತ್ತು ಅನ್ಯಧರ್ಮಗಳನ್ನು ಸಮಾನವಾಗಿ ಕಂಡ ಈ ನಾಡು ಉದಾರ ಭಾವನೆಯಿಂದ ಎಲ್ಲ ಒಳ್ಳೆಯ ವಿಚಾರಗಳನ್ನೂ ಪ್ರೋತ್ಸಾಹಿಸಿತು. ಪರಸ್ಪರ ವಿರುದ್ಧ ವೆಂಬಂತೆ ತೋರಿಬರುವ ಮತಧರ್ಮಗಳೂ ಸಾಮರಸ್ಯದಿಂದ ಮುನ್ನಡೆದವು. 'ಹುಲಿ–ಜಿಂಕೆ', 'ಮಾರ್ಜಾಲ–ಮೂಷಕ' ಸಾಮರಸ್ಯ, ಸಹಕಾರ, ತಾಳ್ಮೆಯ ಅಪೂರ್ವ ಮನೋಭಾವನೆ ಗಳು ಭಾರತೀಯರೆಲ್ಲರಿಗೂ ಉಚ್ಚ ಆದರ್ಶಪ್ರಾಯವಾಗಿರು ವುದು.

ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪದಲ್ಲಿ ಕರ್ನಾಟಕವು ಮುಂದುವರಿದಿರುವುದು. ಅಜಂತ, ಎಲ್ಲೋರ ಮತ್ತು ಬಾದಾಮಿ ಗುಹೆಗಳು, ಚಾಲುಕ್ಯರ ಶೈಲಿಯ ದೇವಾಲಯ ಗಳು, ವಿಶ್ವಪ್ರಸಿದ್ಧವಾದ ಬೇಲೂರು, ಹಳೇಬೀಡು ಮತ್ತು ಸೋಮನಾಥಪುರದಂಥ ಹೊಯ್ಸಳ ಶಿಲ್ಪ ಕೇಂದ್ರಗಳು, ಶ್ರವಣಬೆಳಗೊಳ, ಕಾರ್ಕಳ ಮುಂತಾದ ಸ್ಥಳಗಳಲ್ಲಿರುವ ಏಕ ಶಿಲಾ ಮೂರ್ತಿಗಳು, ಹಂಪೆಯ ಕಲ್ಲಿನ ರಥಗಳು–ಎಲ್ಲವೂ ಕರ್ನಾಟಕದ ಶಿಲ್ಪಕಲೆಯ ಮಹತ್ವವನ್ನು ಎತ್ತಿ ಹಿಡಿದು ಭಾರತೀಯ ಸಂಸ್ಕೃತಿಯ ಸಂಪತ್ತನ್ನು ದ್ವಿಗುಣಗೊಳಿಸಿರು ವುವು. ಚಾಲುಕ್ಯರ ಶಿಲ್ಪಶೈಲಿಯನ್ನು ಕಾಕತೀಯ ಶಿಲ್ಪಿಗಳು ಅನುಸರಿಸಿರುವರು. ಸಾಲಭಂಜಿಕೆಯರ ವಿಗ್ರಹಗಳು ಇದಕ್ಕೆ ಸಾಕ್ಷಿಯಾಗಿರುವುವು. ಬೆಜವಾಡದಲ್ಲಿ ದೊರೆತ ದೊಡ್ಡ ದೊಡ್ಡ ದ್ವಾರಪಾಲಕರ ವಿಗ್ರಹಗಳು ಬಾದಾಮಿ ಚಾಲುಕ್ಯರ ಶಿಲ್ಪಕಲೆ ಯನ್ನು ನೆನಪಿಗೆ ತರುವುವು.



ಕುರುವತ್ತಿಯ ಮಲ್ಲಿಕಾರ್ಜುನ ದೇವಾಲಯದ ಕಂಭದ ಸಾಲಭಂಜಿಕೆ

ಆಂಧ್ರರಾಜ್ಯದ ಕಡಪಾ ಜಿಲ್ಲೆಯ ತಾಡಪತ್ರಿ, ತಮಿಳು ನಾಡಿನ ವೆಲ್ಲೂರ್, ತಿರುವಣ್ಣಾಮಲೈ, ಚಿದಂಬರಂಗಳಲ್ಲಿ ವಿಜಯನಗರ ಕಾಲದ ದೊಡ್ಡ ದೊಡ್ಡ ಗೋಪುರಗಳು ನೂರು ಕಂಬಗಳ ಮಂಟಪ ತೋರಿಬರುತ್ತವೆ.

ಲೇಪಾಕ್ಷಿಯಲ್ಲಿ ವಿಜಯನಗರದ ಅಚ್ಯುತದೇವರಾಯನ ಸಾಮಂತನಾದ ವಿರೂಪಣ್ಣ ನಾಯಕನು ಅತ್ಯಂತ ರಮಣೀಯ ವಾದ ದೇವಾಲಯಗಳನ್ನು ನಿರ್ಮಿಸಿ ಕನ್ನಡದವರ ಶಿಲ್ಪ

ಪ್ರೌಢಿಮೆಯನ್ನು ಅಮರವಾಗಿಸಿರುವನು. ಕರ್ನೂಲ್ ಜಿಲ್ಲೆಯ ಆಲಂಪೂರಿನಲ್ಲಿ ಇರುವ ಸುಂದರ ಶಿಲ್ಪಸೃಷ್ಟಿಗಳಾದ ನವಬ್ರಹ್ಮ ದೇವಾಲಯಗಳು ಬಾದಾಮಿ ಚಾಲುಕ್ಯರ ಕೀರ್ತಿ ಪ್ರತೀಕವಾಗಿ ನಿಂತಿರುವುವು.

ಚಾಲುಕ್ಯರ ವಂಶದವನಾದ ನಾನ್ಯದೇವನು ಹನ್ನೆರಡನೆಯ ಶತಮಾನದಲ್ಲಿ ಮಿಥಿಲೆ, ಬಂಗಾಲ, ಬಿಹಾರ ಮತ್ತು ನೇಪಾಳ ರಾಜ್ಯಗಳ ದೊರೆಯಾಗಿದ್ದನು. ತನ್ನ ಕೃತಿಯಾದ 'ಸರಸ್ವತೀ ಹೃದಯಾಲಂಕಾರ ಹಾರ'ದಲ್ಲಿ ಭರತನ ಸಂಗೀತ ಸೂತ್ರಗಳನ್ನು 'ಎಳೆ ಎಳೆಯಾಗಿ' ವಿವರಿಸಿ ಹೇಳಿರುವನು. ಕರ್ಣಾಟಕ್ಷತ್ರಿಯನಾದ ಲಕ್ಷ್ಮಣಸೇನರಾಜನು ತನ್ನ ತಂದೆಯು ಆರಂಭಿಸಿದ 'ಅದ್ಭುತ ಸಾಗರ' ಗ್ರಂಥವನ್ನು ಪೂರ್ತಿಗೊಳಿಸಿದನು. ಜಯದೇವನಿಗೆ ಆಶ್ರಯದಾತನಾದ ಅವನು ಜಗನ್ನಾಥ ಮಂದಿರದಲ್ಲಿ ಜಯದೇವನ ಪದಗಳನ್ನು ಹಾಡಿಸಿ ಪ್ರೋತ್ಸಾಹ ನೀಡಿರುವನು. ಉಡುಪಿಯ ಮಾಧ್ವಮತಾನುಯಾಯಿಗಳಾದ, ಹೆಸರುವಾಸಿಯಾದ ಹರಿದಾಸರಾದ ನರಹರಿ ತೀರ್ಥರು ಬಿಹಾರದಲ್ಲಿ ರಾಜವಂಶದ ರಕ್ಷಕರಾಗಿದ್ದರು. ಅವರ 'ಉಗಾಭೋಗ' ಪ್ರಭೇದವು ಹಿಂದೂಸ್ತಾನಿಯ ಖಯಾಲ ಸಂಗೀತಕ್ಕೆ ಎಡೆಮಾಡಿಕೊಟ್ಟಿತು. ಇಂಥದೇ ರೀತಿಯಲ್ಲಿ ಕಲ್ಯಾಣ ಚಾಲುಕ್ಯರ ಪ್ರಭಾವದಿಂದಾಗಿ 'ಇಮನ್', 'ಯಮನ್ ಕಲ್ಯಾಣ' ಎಂಬ ಹೊಸ ರಾಗವಾಯಿತು. ಕೇವಲ ರಾಗವಷ್ಟೇ ಅಲ್ಲ, ಹಿಂದೂ ಪದ್ಧತಿಯ ಆತ್ಮ–ಪರಮಾತ್ಮರ 'ಸತಿ–ಪತಿ' ಭಾವವೂ ಅದರ ಪ್ರಧಾನ ವಿಷಯವಾಯಿತು. ವೀರಶೈವರ ವಚನ ಸಾಹಿತ್ಯವು ಅನೇಕ ಭಾಷೆಗಳಲ್ಲಿ ತನ್ನ ಅವತರಣಿಕೆಯನ್ನು ವೀಕ್ಷಿಸಿತು.

ಹದಿನಾರನೆಯ ಶತಮಾನವು ಕನ್ನಡ ಸಂಗೀತ ಕ್ಷೇತ್ರದಲ್ಲಿ

ದೇಶ ಭಾಷೆಯ ಮಹತ್ತ್ವವನ್ನು ಪ್ರಚುರಪಡಿಸಿದರು. ಜೈನ ಕವಿಗಳು ಸಂಸ್ಕೃತದಲ್ಲಿ ಅನೇಕ ಗ್ರಂಥಗಳನ್ನು ಬರೆದರು. ಆರನೆಯ ವಿಕ್ರಮಾದಿತ್ಯನು ಕ್ರಿ. ಶ. ಹನ್ನೆರಡನೆಯ ಶತಮಾನದಲ್ಲಿ ವೇದಗಳ ಭಾಷ್ಯವನ್ನು ಬರೆಸಿದನು. ವಿಜಯನಗರ ಕಾಲದ ಸಾಯಣ ಭಾಷ್ಯವೂ ಮಾಧ್ವಮತದ ಅಪೂರ್ವ ಗ್ರಂಥಗಳೂ ಸಂಸ್ಕೃತ ಸಾಹಿತ್ಯವನ್ನು ಬಹಳವಾಗಿ ಊರ್ಜಿತಗೊಳಿಸಿತು.

ಲಿಪಿಯಲ್ಲಿ ಅತ್ಯಂತ ಹೆಚ್ಚಿನ ಸಾಮೀಪ್ಯ ಇರುವ ತೆಲುಗು ಸಾಹಿತ್ಯದಮೇಲೆ ಕನ್ನಡದ ಪ್ರಭಾವ ಆಗಿದೆ. ಕಾವ್ಯರಚನೆಯು ಮೊಟ್ಟಮೊದಲು ಕನ್ನಡದಲ್ಲಿ ಆಯಿತು. ಶಾಸನಗಳಲ್ಲಿ ಪ್ರಶಸ್ತಿಗಳ ರೂಪ ತಳೆಯಿತು. ನೆರೆಹೊರೆಯ ಭಾಷೆಯಾದ ತೆಲುಗಿನಲ್ಲಿ ಕಾವ್ಯರಚನೆಗೆ ದಿವ್ಯ ಪ್ರೇರಣೆಯನ್ನು ನೀಡಿತು. ಕನ್ನಡ ಕವಿತ್ರಯರ ಪ್ರತಿಬಿಂಬವನ್ನು ತೆಲುಗಿನ ನನ್ನಯ–ತಿಕ್ಕನ–ಎರ್ರನ ಇವರುಗಳಲ್ಲಿ ಕಾಣಬಹುದು. ಕನ್ನಡ ಪಂಡಿತ ನಾರಾಯಣಭಟ್ಟನ ಸಹೋಧ್ಯಾಯಿಯಾದ ನನ್ನಯನ ಪದಗಳು, ಪದಬಂಧನ, ಶೈಲಿ ಪಂಪನ ಕೃತಿಯಂತೆ ಇರುವುವು. ಮೊದಲಬಾರಿಗೆ ನನ್ನಯನು ಕನ್ನಡದಲ್ಲಿದ್ದಂತೆ ಚಂಪೂ ಪ್ರಯೋಗವನ್ನು ಮಾಡಿರುವನು.

ಹತ್ತನೆಯ ಶತಮಾನದ ತೆಲುಗು ಕವಿ ರೇಚನನ 'ಕವಿಜನಾಶ್ರಯ'ವು 'ಛಂದೋಂಬುಧಿ' ಎಂಬ ಕನ್ನಡ ಕೃತಿಯ ನೆಳಲಿಗೆ ಒಳಗೊಂಡಿರುವುದು. ಕನ್ನಡದ 'ಕವಿರಾಜಮಾರ್ಗ'ದಿಂದ ಸ್ಫೂರ್ತಿಯನ್ನು ಪಡೆದು ತೆಲುಗು ಕವಿ ಭೀಮನು 'ಕವಿಜನಾಶ್ರಯಮು' ಎಂಬ ಗ್ರಂಥವನ್ನು ರಚಿಸಿರುವನು. ತೆಲುಗು ಕವಿ ಪಾಲ್ಕುರ್ಕಿ ಸೋಮನಾಥನು ಕನ್ನಡಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಟ್ಟಿರುವನು. ಎರಡನೆಯ ನಾಗವರ್ಮನ 'ಕರ್ಣಾಟಕ

ಭಾಷಾಭೂಷಣ'ವನ್ನು ಅನುಸರಿಸಿ ಕೇತನನು 'ಆಂಧ್ರ ಭಾಷಾ ಭೂಷಣ'ವನ್ನು ರಚಿಸಿರುವನು.

ಹದಿನೈದನೆಯ ಶತಮಾನದ ತೆಲುಗು ಕವಿ. ಶ್ರೀನಾಥನು ಅತ್ಯಂತ ಕನ್ನಡ ಅಭಿಮಾನಿಯು-"ತಲ್ಲೀ ಕನ್ನಡ ರಾಜ್ಯಲಕ್ಷ್ಮೀ ದಯಲೇದಾ ನೇನು ಶ್ರೀನಾಥುಡನು" ಎಂದು ಹಲುಬಿ "ಕರ್ಣಾಟಕಪದ್ಮವನಕೇಳಿ ಶ್ರೀನಾಥ ಭಟ್ಟ ಸುಕವಿ" ಎಂಬ ಪ್ರಖ್ಯಾತಿಗೇರಿದನು. ಪ್ರೌಢರಾಯನ ಕಾಲದಲ್ಲಿ ಕನಕಾಭಿಷೇಕವಾದಾಗ ಅವನು ಮೈಮರೆತು ಹೀಗೆ ಕನ್ನಡದ ಮಹಿಮೆಯನ್ನು ಉದ್ಗರಿಸಿದನು —"ನಾ ಕವಿತ್ವಂಬು ನಿಜಮು ಕರ್ಣಾಟಭಾಷಾ."

ವಿಜಯನಗರದ ಕೃಷ್ಣದೇವರಾಯನ ಔದಾರ್ಯ ಪಾಂಡಿತ್ಯಗಳನ್ನರಿತ ಪೆದ್ದಣ್ಣನಂಥ ದೊಡ್ಡ ಕವಿಗಳು ಹೊಸ ಹೊಸ ಸ್ಫೂರ್ತಿಯನ್ನು ಪಡೆದರು. ದಳವಾಯಿ ವೀರರಾಜನು 'ಗೀರ್ವಾಣಾಂಧ್ರ ಕರ್ಣಾಟಕಾದಿ ನಾನಾ ಭಾಷಾ ಕಾವ್ಯರಚನಾ ಚತುರ'ನಾಗಿ ಭಾರತೀಯ ಸಾಹಿತ್ಯದ ಅನೇಕ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದನು.

ಚಾಮರಸನ ಪ್ರಭುಲಿಂಗಲೀಲೆಯು ತೆಲುಗಿನಲ್ಲಿ ಭಾಷಾಂತರಗೊಂಡಿರುವುದು. ಕ್ರಿ. ಶ. ಒಂಬತ್ತನೆಯ ಶತಮಾನದ ತಿರುತ್ತಕ್ಕದೇವಲ್ ಎಂಬ ಜೈನ ಕವಿಯು 'ಜೀವಕ ಚಿಂತಾಮಣಿ' ಎಂಬ ತಮಿಳು ಗ್ರಂಥದಲ್ಲಿ ಅನೇಕ ಕನ್ನಡ ಪದಗಳನ್ನು ಉಪಯೋಗಿಸಿರುವನು.

ಜ್ಞಾನೇಶ್ವರ ಮತ್ತು ಏಕನಾಥರ ಕಾಲದಲ್ಲಿ ಪಂಢರಾಪುರ ಕನ್ನಡನಾಡಿನಲ್ಲಿದ್ದು ಕನ್ನಡ ಭಾಷೆಯು ಸ್ವಂತವಾಗಿದ್ದುದರಿಂದ ಈ ಭಾಷೆಯ ಕೆಲ ಶಬ್ದಗಳು ಮರಾಠಿ ವ್ಯಾಕರಣ ಮತ್ತು ಭಾಷೆಯಲ್ಲಿ ಸೇರಿ ಹೋಗಿರುವುವು. ಕನ್ನಡದ ಹಳೆಯ

ಛಂದಸ್ಸಾದ ತ್ರಿಪದಿಯಿಂದ ಜ್ಞಾನೇಶ್ವರಿ ಮತ್ತು ಮಹಾನು ಭಾವ ಸಾಹಿತ್ಯವು ರೂಪಿತವಾಗಿರುವುದು. ಆಧುನಿಕ ಮರಾಠಿಯ ಪ್ರತಿನಿತ್ಯದ ಬಳಕೆಯ ಮಾತುಗಳಲ್ಲಿ ಕೆಲ ಕನ್ನಡ ಪದಗಳು, ಪದಗುಚ್ಛಗಳು ಇರುವುವು. ಡಾ. ಸಂಕಾಲಿಯಾರು ಹೇಳುವಂತೆ ಎರಡನೆಯ ಪುಲಿಕೇಶಿಯು ಶಾಸನ ಪ್ರಭಾವದಿಂದಾಗಿ ಗುಜರಾತಿ ಭಾಷೆಯಲ್ಲಿ ಕೆಲವು ಕನ್ನಡ ಶಬ್ದಗಳು, ಪ್ರಯೋಗಗಳು ಸೇರಿವೆ.

ಹೀಬ್ರೂ, ಉರ್ದು, ಪರ್ಶಿಯನ್ ಭಾಷೆಗಳಲ್ಲಿಯೂ ಕನ್ನಡದ ಶಬ್ದಗಳು ಅಲ್ಲಲ್ಲಿ ಕಂಡುಬರುವುವು.

ಹೀಗೆ ಕರ್ನಾಟಕದ ಸಂಸ್ಕೃತಿಯು ಭಾರತೀಯ ಸಂಸ್ಕೃತಿಗೆ ಸರ್ವತೋಮುಖವಾದ ಅಪೂರ್ವ ಕೊಡುಗೆಯನ್ನು ನೀಡಿರುವುದು. ಹಿತವೆಂದು ಎನಿಸಿದಾಗ ಇತರ ಸಂಸ್ಕೃತಿಯ ಒಳ್ಳೆಯ ಅಂಶಗಳನ್ನು ತಾನು ಸ್ವೀಕರಿಸುವುದು. ಈ ರೀತಿಯ 'ಕೊಟ್ಟು ತೆಗೆದುಕೊಳ್ಳುವುದು' ಭಾರತದ ಅನಾದಿಕಾಲದ ಉತ್ತಮ ಸಿದ್ಧಾಂತವಾಗಿರುವುದು. ಅದುವೇ ಸಫಲ ಸಂಸ್ಕೃತಿಯ ಕುರುಹು.



## ಸಹಾಯಕ ಗ್ರಂಥಗಳು


೧ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ

—ಡಾ ಎಂ. ಚಿದಾನಂದಮೂರ್ತಿ

೨ ಬಿಡಿ ಬರಹಗಳು—ಡಾ. ಶಿವರಾಮ ಕಾರಂತ

೩ ಕನ್ನಡ ಭಾಷೆಯ ಚರಿತ್ರೆ—ಪ್ರ. ಗೋ. ಕುಲಕರ್ಣಿ

4 Chaitanya, His Life & Doctrine—A. K. Majumdar

5 Indian Music—B. Chaitanya Deva

6 The Heritage of Karnataka—R. S. Mugali

7 The Culture of India—C. C. Dutt

8 Indian Culture through the Ages - S.V.Venkateswar

9 Karnataka Through the Ages

೧೦ ತೆಲುಗು ವಿಜ್ಞಾನಸರ್ವಸ್ವಮು-ಮೂರನೆಯ ಸಂಪುಟ

೧೧ ಕನ್ನಡ-ತೆಲುಗು (ಸಂಬಂಧ, ಸಾಮ್ಯ)

—ಪ್ರೊ। ಕೆ. ಎಂ. ಕೃಷ್ಣರಾವ್

೧೨ ಭಾರತೀಯ ಸಂಗೀತಕ್ಕೆ ಕರ್ನಾಟಕದ ಕೊಡುಗೆ

— ಡಾ. ವಸಂತಕವಲಿ

